ರಂಗಭೂಮಿ ಗ್ರಂಥಮಾಲೆ

# ಚಂದ್ರಹಾಸ

(ನಾಟಕ)


ಲೇಖಕರು

ಶ್ರೀ। ಕೆ. ವಿ. ಪುಟ್ಟಪ್ಪ, ಎಂ.ಎ.,

ಮೈಸೂರು.



ಪ್ರಕಾಶಕರು

ರಂಗಭೂಮಿ ಕಾರ್ಯಾಲಯ,

ಮನೆವಾರ್ತೆಪೇಟೆ, - - - - ಬೆಂಗಳೂರು ಸಿಟಿ.

ಮುದ್ರಣಕಾರರು

ಬಿ. ಶ್ರೀನಿವಾಸಯ್ಯಂಗಾರ್,

ಮನೆವಾರ್ತೆಪೇಟೆ, - - - - ಬೆಂಗಳೂರು ಸಿಟಿ.

# ಮುನ್ನುಡಿ

Checked 1965

---

‘ ಕವಿಚೂತವನ ಚೈತ್ರ ’ನಾದ ಲಕ್ಷ್ಮೀಶನು ಅಶ್ವಮೇಧಯಾಗವೇ ಮುಖ್ಯ ಕಥೆಯಾಗಿರುವ ತನ್ನ ‘ ಜೈಮಿನಿ ಭಾರತ ’ದಲ್ಲಿ ನಡುನಡುವೆ ಕೆಲವು ರಸಪೂರ್ಣವಾಗಿರುವ ಉಪಕಥೆಗಳನ್ನು ಸುಮನೋಹರವಾಗಿ ನೆಯ್ದಿದ್ದಾನೆ. ಅವುಗಳಲ್ಲಿ ಚಂದ್ರಹಾಸನ ಕಥೆಯೂ ಒಂದು. ಮರಳಿ ಮರಳಿ ಓದಿ ಸುಖಾನುಭವವನ್ನು ಹೊಂದಿದ ನನಗೆ ಅದನ್ನು ‘ ದೃಶ್ಯ ರೂಪದಲ್ಲಿ ಬರೆದರೆ ಚೆನ್ನಾಗಬಹುದೋ ಏನೋ? ನೋಡೋಣ ’ ಎಂಬ ‘ ಹುಚ್ಚು ’ ಹಿಡಿಯಿತು. ಆ ಹುಚ್ಚಿ ’ನ ಪ್ರತಿಫಲವೇ ಈ “ ಚಂದ್ರಹಾಸ ” ನಾಟಕವು.

ಕಥೆಯನ್ನು ದೃಶ್ಯರೂಪಕ್ಕೆ ತಿರುಗಿಸುವಾಗ ಕೆಲವು ಸಣ್ಣ ಪುಟ್ಟ ಮಾರ್ಪಾಡುಗಳನ್ನು ಮಾಡಿದರೆ ರೂಪಕಕ್ಕೆ ರಸಪುಷ್ಟಿ ದೊರಕಬಹುದು ಎಂದು ನನಗೆ ತೋರಿತು. ಅದರಂತೆ, ವಸ್ತುವಿನಲ್ಲಿ ಹಲ ಕೆಲವು ಬದಲಾವಣೆಗಳನ್ನು ಮಾಡಿಕೊಂಡಿರುವೆನು. ಲಕ್ಷ್ಮೀಶ ಕವಿಯ ಸುಂದರ ಮಂಜುಳ ಶೈಲಿಯು ನನ್ನ ಚಿತ್ತಭಿತ್ತಿಯಲ್ಲಿ ಅಚ್ಚೊತ್ತಿದಂತೆ ಇದ್ದುದರಿಂದ ನಾಟಕವನ್ನು ಬರೆಯುವಾಗ ಕವಿವರ್ಯನ ಪದ ಪದ್ಯಭಾಗಗಳನ್ನು ಅಲ್ಲಲ್ಲಿ ಉಚಿತ ತೋರಿದಂತೆ ಅನಿವಾರ್ಯವಾಗಿ ಉಪಯೋಗಿಸಿಕೊಂಡಿದ್ದೇನೆ. ‘ ಜೈಮಿನಿ ಭಾರತ ’ವನ್ನು ಪ್ರೀತಿಸುವ ಕನ್ನಡಿಗರಿಗೆ ಈ ನಾಟಕವು ಒಂದಿನಿತಾದರೂ ಸಂತೋಷದಾಯಕವಾದರೆ ನನ್ನ ಅಲ್ಪ ಪ್ರಯತ್ನಕ್ಕೆ ಮಹಾ ಫಲವು ಲಭಿಸಿತೆಂದು ತಿಳಿದು ವಿನೀತನಾಗುವೆನು.

ಶ್ರೀ ರಾಮಕೃಷ್ಣಾಶ್ರಮ,
ಮೈಸೂರು,
೧೧ನೆ ನವಂಬರು ೧೯೩೯.

ಕೆ. ವಿ. ಪುಟ್ಟಪ್ಪ.

ನಮೋ ಭಗವತೇ ಶ್ರೀರಾಮಕೃಷ್ಣಾಯ ॥

# ಚಂದ್ರಹಾಸ

(ನಾಟಕ)

## ಆದಿರಂಗಂ.

### ದೃಶ್ಯ ೧

[ಕುಂತಳನಗರದ ಒಂದು ಬೀದಿ. ಚಂದ್ರಹಾಸನೇ ಮೊದಲಾದ ಮೂವರು ಹುಡುಗರು ಧೂಳಾಟವಾಡುತ್ತಿರುವರು.]

೧ನೆ ಬಾಲಕ :—ನಾನೊಂದು ಹಣ್ಣು ಬರೆದೆನು ; ನೋಡಿ !

೨ನೆ ಬಾಲಕ :— ನೋಡಿಲ್ಲಿ
ನಾನೊಂದು ಹಕ್ಕಿಯನು ಕೆತ್ತಿಹೆನು ; ಹಾರುತಿದೆ !
ಹಾರಿಹೋಗುವ ಮುನ್ನ ಬನ್ನಿ ; ನೋಡಿ !

ಚಂದ್ರ :—ಸುಭಟನೋರ್ವನು ಬಿಲ್ಲು ಬಾಣಂಗಳನು ಪಿಡಿದು
ಕದನಕ್ಕೈದುವ ಚಿತ್ರವನು ಕೆತ್ತಿಹೆನು ! ನೋಡಿ !

೧ನೆ :—ಎಲ್ಲಿ ? ಎಲ್ಲಿ ?

೨ನೆ :— ನನಗು ತೋರಿಸು ; ಎಲ್ಲಿ ?

ಚಂದ್ರ :—ಹೆದರದಿರಿ ! ಹಣ್ಣು ಹಕ್ಕಿಗಳೆಂದು ತಿಳಿಯದಿರಿ !
(ಬಂದು ನೋಡುವರು)

೨ನೆ :—ಅವನ ಬೆನ್ನಿನಮೇಲೆ ತೂಗಾಡುತಿಹುದೇನು ?

ಚಂದ್ರ :—ಬತ್ತಳಿಕೆ ! ನಿನ್ನ ಹಕ್ಕಿಯದೆಲ್ಲಿ ?

೧ನೆ :— ಹೋಯಿತದು
ಹಾರಿ ನಿನ್ನ ಸುಭಟನ ಕಂಡು

೨ನೆ :— ಹಣ್ಣೆಲ್ಲಿ ?

ಚಂದ್ರ :—ಹಸಿದ ತಿರ ತಿಂದು ತೇಗಿದಳೆಂದು ತೋರುವುದು!
ಕೇಳಣ್ಣ ಕೋಗಿಲೆಯು ಹಾಡುತಿದೆ ಮಾಮರದ
ತಳಿರಲ್ಲಿ !

[ಎಲ್ಲರೂ ಕೋಗಿಲೆಯನ್ನು ಅನುಕರಿಸುತ್ತಾ ಮಳಲಲ್ಲಿ ಆಡಲಾರಂಭಿಸುವರು. ಚಂದ್ರಹಾಸನಿಗೆ ಒಂದು ಸಾಲಗ್ರಾಮ ಶಿಲೆ ಸಿಕ್ಕುವುದು. ಚಂದ್ರಹಾಸನು ಹಿಗ್ಗಿ] ಸಿಕ್ಕಿತೆನಗೊಂದೊಡವೆ ! [ಎದ್ದುನಿಂತು ಬಾಯಲ್ಲಿ ಬಚ್ಚಿಟ್ಟುಕೊಳ್ಳುವನು]

೧ನೆ :— ಏನದು ?

೨ನೆ :—ನೋಡೋಣ ! (ಚಂದ್ರಹಾಸನು ತೋರಿಸುತ್ತಾ)

ಚಂದ್ರ :— ಬಟ್ಟಗಲ್ಲಿಂತು ವರ್ತುಳದಿಂದೆ
ಚೆಲ್ವಾಗಿ ಪುಟ್ಟುವುದೆ ಪೊಸತು ! ಕಟ್ಟಸಕ
ದಿಂದ ಕಾಣಿಸುತಿಹುದು ರಮಣೀಯವಾಗಿ !

೨ನೆ :—ಗೋಲಿಯಾಟಕೆ ಸೊಗಸು !

೧ನೆ :— ಪೂಜಿಸುವರೀತೆರದ
ಕಲ್ಲೊಂದ ನಮ್ಮ ಮನೆಯಲ್ಲಿ. ಸಾಲಗ್ರಾಮ
ವೆಂದದನು ಕರೆಯುವರು. ದೇವರಲ್ಲಿಹನಂತೆ.
(ಚಂದ್ರಹಾಸನು ಮರಳಿ ಬಾಯಲ್ಲಿಡುವನು)
ಎಂಜಲಾಗುವುದದಕೆ !

ಚಂದ್ರ :— ಇಡಲೆನಗೆ ತಾವಿಲ್ಲ [ದೂರ ನೋಡಿ]
ಯಾರವರು ಮಾರದೊಳು ಬರುತಿಹರು ?

೨ನೆ :— ತಿಳಿಯದೆ ?
ದುಷ್ಟಬುದ್ಧಿ.

ಚಂದ್ರ :— ಯಾರವನು ?

೧ನೆ :— ನಮ್ಮ ರಾಜ್ಯದ ಮಂತ್ರಿ.

ಚಂದ್ರ :—ಅವನ ಸಂಗಡ ಬರುವ ಬಾಲಕರದಾರು ?

೨ನೆ :—ಮದನನೆಂಬುವನೊಬ್ಬ ಮಂತ್ರಿಸುತ. ಮಂತ್ರಿಸುತೆ
ಗಾಲವನ ಕೈಹಿಡಿದು ಬಹ ವಿಷಯೆ.

ಚಂದ್ರ :— (ಕೈತೋರಿಸಿ) ಅವನಾರು ?

೧ನೆ :—ಗಾಲವನು ರಾಜರ ಪುರೋಹಿತನು. ಕೈತೋರ
ಬೇಡ. ಕೆಡುಕಾಗುವುದು.

[ದುಷ್ಟಬುದ್ಧಿ. ಬಾಲಕನಾದ ಮದನ. ಬಾಲೆಯಾದ ವಿಷಯೆ ಪುರೋಹಿತನಾದ ಗಾಲವ ಇವರು ಬರುವರು. ಬಾಲಕರು ಹಿಂಜರಿವರು. ಗಾಲವನು ನಿಂತು ಚಂದ್ರಹಾಸನನ್ನು ಎವೆಯಿಕ್ಕದೆ ನೋಡುತ್ತಾ ನಿಲ್ಲುವನು ]

ದುಷ್ಟ :—ಗಾಲವ ಪುರೋಹಿತರೆ ನಿಂತೇನ ನೋಡುವಿರಿ?

ಗಾಲವ :—(ತೋರಿಸುತ್ತಾ) ನೋಡಲ್ಲಿ ಮಣ್ಣಾಟವಾಡು
[ತಿಹ ಬಾಲಕರ
ಗುಂಪಿನೊಳು ತಾರೆಗಳ ನಡುವೆಯಿಹ ಹಿಮಕರನ
ಹೋಲುತಿಹ ಬಾಲಕನು ನಿಂತಿಹನು !

ದುಷ್ಟ :— ಅದರಲ್ಲಿ
ಅತಿಶಯವದೇನು ?

ಗಾಲವ:—ಆರ ಸುತನೀತರುಣ ?
ಎಲ್ಲಿಂದ ಬಂದಿಹನು ?

ದುಷ್ಟ :— ಈಪರಿಯೊಳೆನಿತಿಲ್ಲ
ಅನಾಥರಾಗಿಹ ಬಾಲರೀ ವ.ಹಾಪುರದಲ್ಲಿ !
ಎತ್ತಣವ ನಾರಸುತನೆಂದರಿಯೆ. ರಾಜಕಾ
ರ್ಯದೋಳಗಿಹ ನಮಗೇತಕಿದರ ಚಿಂತೆ ?

ಗಾಲವ :—ಹಾಗಲ್ಲ ನೋಡವನ ; ರಾಜಚಿನ್ಹೆಗಳೆಂತು
ಶೋಭಿಪವು ಮೈಯಲ್ಲಿ. ಮೊಗದ ಕಾಂತಿಯ ನೋಡು !
ಎಂದಿರ್ದೊಡಂ ಚಾರು ಲಕ್ಷಣದೊಳೀ ಪೊಳ
ಲ್ಗೀ ಕುಂತಳಾಧೀಶನಾಳ್ವನಿವ್ನಾ ಪೊಡವಿ
ಗೊಡೆಯನಹ ನೀತನಂ ನೀನಿರಿಸಿಕೊಂಡು
ರಕ್ಷಿಪುದು.

ದುಷ್ಟ :—(ಚಿಂತಿಸಿ) ಕರೆದವನ ಕೇಳ್ವೋಂ. ಯಾರೆಂದು ?

[ಗಾಲವನು ಕೈಸನ್ನೆಯಿಂದ ಚಂದ್ರಹಾಸನನ್ನು ಕರೆಯುವನು. ಚಂದ್ರಹಾಸನು ವಿಸ್ಮಯದಿಂದ ಬಳಿಗೆ ಬರುವನು. ಮದನ, ವಿಷಯೆ ಇಬ್ಬರೂ ಹತ್ತಿರಕ್ಕೆ ಹೋಗುವರು.]

ಮಗುವೆ, ನೀನಾರವಂ ?

ಚಂದ್ರ :— ನಾನರಿಯೆ !

ಗಾಲವ :—ನಿನ್ನ ಹೆಸರೇನು ?

ಚಂದ್ರ :— ನನಗದೂ ಗೊತ್ತಿಲ್ಲ.

ಗಾಲವ :—ನಿನ್ನ ಪಿತನಾರು ? ನಿನ್ನ ಹೆತ್ತವಳಾರು ?

ಚಂದ್ರ :—ನಾನೊಂದನರಿಯೆ.

ಗಾಲವ :— ನಿನಗುಣಿಸನಿಕ್ಕುವರದಾರು ?

ಚಂದ್ರ—ನನ್ನಜ್ಜಿ !

ಗಾಲವ :— ಯಾರಾಕೆ ? ಎಲ್ಲಿಹಳು ?

ಚಂದ್ರ :—(ದೂರ ಕೈತೋರಿಸಿ) ಅಲ್ಲಿಹಳು !

ದುಷ್ಟ :—ಗಾಲವರೆ, ಈಗಿರಲಿ, ಆಮೇಲೆ ನೋಡೋಣ
ಬನ್ನಿ ಹೊತ್ತಾಯ್ತು, ರಾಜಕಾರ್ಯಕ್ಕೆ. ಬಾಲಕನೆ
ಬಹಳ ಸಂತಸವಾಯ್ತು ನಿನ್ನ ನೋಡಿ ! ಹೋಗು
ನಿನ್ನಜ್ಜಿಗಿದನರುಹು.

[ಚಂದ್ರಹಾಸನು ತೆರಳುವಾಗ ವಿಷಯೆಯು ಕೈಲಿದ್ದ ಹೂವೊಂದನ್ನು ಕೊಡುವಳು ಎಲ್ಲರೂ ಹೋಗುವರು. ಚಂದ್ರಹಾಸನು ಮಾತ್ರ ನಿಲ್ಲುವನು. ಉಳಿದಿಬ್ಬರು ಬಾಲಕರು ಹತ್ತಿರಕ್ಕೆ ಓಡಿಬಂದು ಹೂವನ್ನು ನೋಡಿ]

೧ನೇ :— ಯಾರಿತ್ತರೀಹೂವ ?

ಚಂದ್ರ :—ವಿಷಯೆ.

೨ನೇ :—ರನ್ನದಲಿ ಕೆತ್ತಿದುದು !

೧ನೇ :— ಬಾರ್‍ ಇ
ಕೇಳಲ್ಲ ಅಮ್ಮ ಕೊಡುವಳು.

[ಹೊರಡುವರು. ಚಂದ್ರಹಾಸನು ಹೂವನ್ನೂ ಸಾಲಿಗ್ರಾಮವನ್ನೂ ನೋಡುತ್ತಾ ನಿಲ್ಲುವನು]

(ಪರದೆ ಬೀಳುವುದು)

## ದೃಶ್ಯ ೨

[ದುಷ್ಟಬುದ್ಧಿಯ ಮನೆಯ ಒಂದು ಕೊಠಡಿಯಲ್ಲಿ ಅವನು ಚಿಂತಾಕ್ರಾಂತನಾಗಿ ಕುಳಿತಿರುವನು.]

ದುಷ್ಟ:—ಈ ಕುಂತಳೇಂದ್ರಂಗೆ ಸುತರಿಲ್ಲ ರಾಜ್ಯಮೆನ
ಗೇಕಾಧಿಪತ್ಯಮಾಗಿರ್ದಪುದು. ಮುಂದಿವಂ
ಭೂಕಾಂತನಾಪಸಂ ಗಡ ! ವಿಪ್ರರೆಂದ ನುಡಿ
ತಪ್ಪದದು ! ಎನ್ನಾತ್ಮಜರ್ಗೆ ಬೇಕಾದ
ಸಂಪದಂ ಬಯಲಾಗಿ ಪೋದಪುದೇ ? ಗಾಲವನು
ಏನೆಂದ ! ದುಷ್ಟಬುದ್ಧಿಯ ನಾಮವನ್ವರ್ಥ
ವಾಗದಿರೆ ಎನ್ನ ಬಾಳಿದು ವ್ಯರ್ಥ ! ಎನ್ನಿಳೆಗೆ,
ಎನ್ನಾತ್ಮಜರ್ಗೆ ಮುಡುಪಾದ ಈ ಪೊಳಲಿಂಗೆ
ಅವನೊಡೆಯನಾಗುವನೆ. ಇಲ್ಲ, ಎಂದೂ ಇಲ್ಲ !
ವಿಪ್ರನಾಡಿದ ಮಾತು ಪುಸಿಯುಪ್ಪುವಂತೆನಗಿ
ಚಾಂಡಾಲರಿಂದಾ ತರಳನಂ ಕೊಲ್ಲಿಪೆಂ !
ಅರಸುಗುವರಿಯನೆನ್ನ ಮುದ್ದು ಮಗ ಮದನಂಗೆ
ಕೈಹಿಡಿಸಿ ಪಟ್ಟಗಟ್ಟುವೆನವಗೆ. ಕಿಂಕರನು
ಕಟುಕರನ್ನೇಕಿನ್ನು ತರಲಿಲ್ಲ. ಕಾಲೊಳಿಹ
ಕಂಟಕವ ಕಿತ್ತಹೊರತೆನಗೆ ಸುಖವಿಲ್ಲ.
ಎನ್ನ ಬಾಳಿನ ಶಾಂತಿ ಬಾಲಕನ ಕೊಲೆಯಲ್ಲಿ
ಮಲಗಿಹುದು. [ಮದನ ವಿಷಯೆ ಬರುವರು]

ಮದನ :— ಅಪ್ಪಾ, ಆ ಬಾಲಕನು ಯಾರು ?

ವಿಷಯೆ :—ನಮ್ಮ ಜೊತೆಗಾಡುವವರಾರಿಲ್ಲ. ಅವನಿದ್ದ
ರಾಟವಾಡಲು ಆಗುತಿತ್ತಪ್ಪಾ. ಕರೆಸವನ.

ದುಷ್ಟ:—(ಮಗಳನ್ನು ಎತ್ತಿಕೊಂಡು) ಕರೆಸುವೆನು ತಾಳಮ್ಮ
[ಎನ್ನ ಮುದ್ದಿನ ಗಿಣಿಯೆ.

[ದುಷ್ಟಬುದ್ಧಿಯ ಹೆಂಡತಿ ತಾರಕಾಕ್ಷಿಯು ಬಂದು]

ತಾರ :—ಕರ್ಣನಂ ಮೀರಿಹಳು ದಾನದಲಿ, ವಿಷಯೆ.
ಇಂದೊಂದು ರನ್ನದಲರನು ಯಾರಿಗೋ ಕೊಟ್ಟು
ಬಂದಿಹಳು !

ವಿಷಯೆ :— ಯಾರಿಗಿಲ್ಲಪ್ಪಾ ಅವನಿಗೇ !
ನೀಕರೆದು ದಾರಿಯಲಿ ಮಾತನಾಡಿದೆಯಲ್ಲಾ
ಅವನಿಗೇ.?

ತಾರಾ :—ಮುಂದವನೆ ಗಂಡನಾಗುವನೇನೊ
ನಿನಗೆ ?

ದುಷ್ಟ :—ಕೇಳಿದೆಯ ತಾರಾ ಪುರೋಹಿತನು
ಪೇಳ್ವುದನು ? ಬೀದಿಯಲಿ ಸಂಚರಿಪ ದೇಸಿಗನು
ಮುಂದೆಮ್ಮ ನಾಡಿಗೆ ದೊರೆಯಪ್ಪನಂತೆ.

ತಾರಾ :—ಸರಿ, ಗಾಲವನ ಮಾತು. ಕಟ್ಟುಕತೆಗಳ ಕಾಲ
ವೆಂದರಿತನೇನವನು ?

ದುಷ್ಟ:— ತಪ್ಪುವದೆ ಹೇಳು
ವಿಪ್ರರೆಂದಾಮಾತು. ಗಾಲವನು ಪ್ರಾಕೃತನೆ ?

ತಾರಾ :—ಅವನ ಹಣೆಯಲ್ಲಿ ಬರೆದಂತಾದರೇನಮಗೆ?

ದುಷ್ಟ :—ಯೋಚಿಸಾಡುವೆ ಏನು ? ಬಹುದೂರವಿಹುದೆನ್ನ
ನೋಟ. ಹೆಂಗಸು ನೀನು ! ನಿನಗೇನು ಗೊತ್ತು ?
ಈ ಕುಂತಳೇಂದ್ರಂಗೆ ಸುತರಿಲ್ಲ. ನಮ್ಮ ಮಗ
ಮದನಂಗೆ ಪಟ್ಟಾಭಿಷೇಕವಂ ಮಾಡಿ
ಅರಗುವರಿಯಂ ತಂದು ಮದುವೆಯಂ ಮಾಡಿ
ಆತನರಸಾಗಬೇಕೆಂಬಾಸೆ ಎನಗಿಹುದು
ನನ್ನ ನಿನ್ನೊಳಗಿರಲಿ ಬಯಲಾಗದಿರಲಿ ಇದು.
ಅದಕೆ ಬೇಕಾದೆಲ್ಲ ಯತ್ನಗಳ ನೆಸಗುವೆನು.
ನರಕವಾದರು ಸರಿಯೆ ಈಜುವೆನು ಪ್ರಾಣ್ಕಿಯಿದು !
ಹಿಂದಿನಿಂದೆಲ್ಲವನು ನಿನಗೊರೆವೆ. ಮಕ್ಕಳನು
ಕರೆದುಕೊಂಡೀಗ ನೀಹೊರಡು. ಗುಟ್ಟಾದ
ಕಜ್ಜವಿಹುದೆನಗೆ. [ಮಾತನಾಡದೆ ಅವರು ಹೊರಡುವರು)
ನೆತ್ತರಿಗೆ ಹಸಿದಿಹೆನು
ಬಾಲನಾದೊಡೆ ಏನು ? ಹೇಳು ಮರಿಯಾದೊಡೇಂ ?
ಅಳ್ಕರಿಂದಪ್ಪಿದೊಡೆ ಕಚ್ಚದೇ ? ಹುಲಿ ಹಸುಳೆ ಎಂದು
ಹಾಲೂಡಿ ಸಾಕಿದರೆ ವಿಶ್ವಾಸಿಯಾಗುವುದೆ ?
ಬೆಳೆವ ಮುಳ್ಳನು ಮೊಳೆಯುವಾಗಲೇ ಮುರಿಯುವುದು
ಮತಿವಂತರಿಗೆ ಲೇಸು ! [ಕಾಕರನು ಮೂವರು ಚಾಂಡಾ
ಲರನ್ನು ಕರೆದುಕೊಂಡು ಬರುವನು]
ಏಕಿಷ್ಟು ಹೊತ್ತಾಯ್ತು !
ನಿಮ್ಮ ಮೈ ಕೈಗಳಲಿ ನೆತ್ತರಿನ ಕಲೆಯೇನು ?

ಭೀಷಣ :—ನೆರೆಹಿಡಿದ ಬೇಹುಗಾರನನೀಗಲೇ ಕೊಂದು
ಬಂದಿಹೆವು. ಕೈ ತೊಳೆಯಲೂ ಕೂಡ ಸಮಯ
ಸಿಗಲಿಲ್ಲ. ಮುಂದೇನು ತಮ್ಮಾಜ್ಞೆ ?

ದುಷ್ಟ:— (ಕಿಂಕನಿರಗೆ) ಕಿಂಕರಾ
ಆಚೆನಡೆ. (ಅವನು ಹೋಗುವನು) ಭೀಷಣಾ ಬಳಿಗೆ ಬಾ
ಇಂದೊಂದು
ಕೊಲೆಯಾಗಬೇಕು. ಆಯಾಸದ ಕೊಲೆಯಲ್ಲ.
ಬಲಿಯು ಮಿಗವಾಗುವನು ಬಾಲಕನು.

ಭೀಷಣ :— ಅದಕೇನು
ಮಾಸಾಮಿ. ಬೆಸಸಿದೊಡೆ ಕಾರ್ಯ ಕೈಗೂಡಿದಂತೆ.
ಯಾರವನು ? ಎಲ್ಲಿಹನು ?

ದುಷ್ಟ :— ತಂದೆತಾಯಿಲ್ಲದೇ
ಬೀದಿಗಳಲಲೆಯುತಿಹ ದೇಸಿಗನು.

ಭೀಷಣ :— ಯಾವ
ಅಪರಾಧ ?

ದುಷ್ಟ :—ನಿನಗೇಕೆ ಆ ಚಿಂತೆ. ಸೇವಕರು
ಬೇಕು ಬೇಡನ್ನದೆ ಕಾರ್ಯಕನುವಾಗಬೇಕು.
"ಹೇಳುವುದಕವರಲ್ಲ ! ಕೇಳುವುದಕವರಲ್ಲ ;
ಮಾಡಿ ಮಡಿವುದಕವರು !" ತಿಳಿಯಿತೇ ಭೀಷಣ ;

ಭೀಷಣ :—ತಪ್ಪಾಯ್ತು ನನ್ನೊಡೆಯ.

ದುಷ್ಟ:—ಈ ಪುರದ ಬೀದಿಯೊಂದೊಳೋರ್ವ ಮುದುಕಿಯ
ಕೂಡಿ
ವಾಸಿಸುವನೋರ್ವ ತೇಜಸ್ವಿಯಾಗಿಹ ತರಳಂ
ಹೊಸಬರವನಿಲ್ಲಿಗೈತಂದು ಬಹು ಕಾಲವಾ
ಗಿಲ್ಲ. ನೀವವರ ನೆಲೆಯರಿತು ಮುದುಕಿಯುಂ
ಕೊಂದಿಲ್ಲಿ ಕಾನನಾಂತರದೊಳಾತರಳನಂ
ಸಂಹರಿಸಿ ಕುರುಪು ತಂದೆನಗೆ ತೋರುವುದು
ಯಾರರಿಯದಂತೆ ;

ಭೀಷಣ :— ಕುಂದಿಲ್ಲದಂತೆ ಕೊಲೆ
ಮಾಡುವೆವು

ದುಷ್ಟ:— ತರಳನಂದವಕಂಡು ಎದೆಗರಗ
ಬೇಡಿ.

ಭೀಷಣ :—ಎದೆಗರುಗುವುದೆ? ಮರುಕವೆಂಬುದನರಿಯೆ.

ದುಷ್ಟ :—ರೋದನಕೆ ಮರುಳಾಗಬೇಡಿ.

ಭೀಷಣ :— ರೋದನವ
ಕೇಳಿಕೇಳಿಮ್ಮ ಕರ್ಣಗಳು ಕಿವುಡಾಗಿ
ಹೋಗಿಹವು ; (ಕಟುಕರು ಹೋಗುವರು)

ದುಷ್ಟ:—ನೆತ್ತರಿನ ಕಡಲಲ್ಲಿ ಅರೆವಾಸಿ
ಈಜಿಹೆನು, ಹಿಂಜರಿವುದೇಕಿನ್ನು. ತೀರವನು
ಸೇರುವೆನು. ಇಲ್ಲವಾದರೆ ನಡುವೆ ಮುಳುಗುವೆನು !
(ಪರದೆ ಬೀಳುವುದು)

## ದೃಶ್ಯ ೩

[ಕುಂತಳನಗರದಲ್ಲಿ ಒಂದು ಸಣ್ಣ ಗುಡಿಸಲು. ದಾದಿಯೊ
ಬ್ಬಳು ನರಳುತ್ತಾ ಮಲಗಿಹಳು. ಅವಳ ಬಳಿ ಹೆಂಗಸೊ
ಬ್ಬಳು ಕುಳಿತಿಹಳು]

ಹೆಂಗಸು :—ಅಮ್ಮೇಲೆ ?

ದಾದಿ :—ಕೇರಳವನರಿಸ್ಸಪರು ಮತ್ತಿದರು.

ದೊರೆಯು ರಣರಂಗದಲಿ ಕಾದಾಡಿ ಮೃತ್ಯುವಿಗೆ
ತುತ್ತಾದ. ಮೇಧಾವಿ ಎಂಬವನ ಪತಿವ್ರತೆಯು,
ಈ ಬಾಲಕನ ತಾಯಿ, ಸಹಗಮನವೆಸಗಿದಳು.
ಅರಿಗಳಪ ಹರಿಸಾಳುತಿಪರಾ ಧರಿತ್ರಿಯಂ!
ಆಶಿಸುಗುವರನ ಕೊಲ್ಲಲೆಂದರಿಸಿದರು; ಎಲ್ಲಿಯುಂ
ದೂತರನ್ನಟ್ಟಿದರು. ನಾನಾಗ ಬಾಲಕನ ತೊಟ್ಟಿಲನು
ಹೊತ್ತುಕೊಂಡವರ ಕಣ್ಣಿಗೆ ಬೀಳದಂತಲೆದು
ಅನ್ನವಿಲ್ಲದೆ ಹಗಲಿರಳು ತಿರುಗಿ ಕಟ್ಟಕಡೆ
ಗೀ ನಗರಿಗೈತಂದೆ. ಇಲ್ಲಿ ದಿನವೂ ತಿರಿದು
ಬಾಲಕನ ಸಲಹಿದೆನು. ನನಗಾತನೇ ಕಣ್ಣು!
ನನಗಾತನೇ ಹೃದಯ! ನನಗಾತನೇ ಜೀವ!
ನಾನಿನ್ನು ಹೋಗುವೆನು. ಇನ್ನವನ ರಕ್ಷಣೆಯ
ಭಾರ ಇದುವರೆಗೆ ಸಲಹಿದ ಹರಿಯಮೇಲಿಹುದು!

[ಬಿಕ್ಕಿ ಬಿಕ್ಕಿ ಅಳುವಳು]

ರಂಗಸು :—ಅಳುವುದೇಕಮ್ಮ, ಶ್ರೀಹರಿಯೆ ಕಾಯುವನು.
ಹುಟ್ಟಿಸಿದ ಪರಮಾತ್ಮ ಸಲಹದಿಹನೇ ಹೇಳು?
ಅಲ್ಲದೇ ಬಾಲಕನು ಹರಿಭಕ್ತನೆಂದೊರೆದೆ.
ಭಕ್ತರಂ ಪೊರೆಯುವುದೆ ತಿರುಪತಿಯ ಶೀಲ!

ದಾದಿ :—ತಂಗಿ, ಎಷ್ಟೋ ಕಷ್ಟವ ಸಹಿಸಿ ಪಾಲಿಸಿದೆ ಮಗುವ
ಇಡೆ ತೊಟ್ಟಿಲಿಲ್ಲಾಡಿಸುವರಿಲ್ಲಿ; ತೊಡಿಸೆ ಪೊಂ
ದೊಡಿಗೆಯಿಲ್ಲಿರೆ ನಿಳಯುಮಿಲ್ಲ; ಪಿಡಿದರವ ನೀ
ರ್ಕುಡಿವಾಲ್ಗಳಿಣ್ಣೆ ಬೆಣ್ಣೆಗಳಿಲ್ಲ; ಮುದ್ದಿಸುವ
ತಾಯ್ತಂದೆಯರುಮಿಲ್ಲ. ಇದನ್ನೆಲ್ಲ ಕಂಡೆನ್ನ
ಕಣ್ಣೊಡೆಯದೇ ಎಂದು ಎದೆ ಬೇಯುತಿತ್ತು.
ನೊಳೆವಲ್ಲುಗುವ ಜೊಲ್ಲು, ದಟ್ಟಿಕಡಿ, ತೊದಲನುಡಿ,
ತೊಳ ತೊಳಗುತಿಹ ಸೊಬಗು, ಮೆರೆವವಗೆ ಮೊಗದ ಬಗೆ
ಪೊಳೆವ ಕಣ್ಮೆಸುಪ ನುಣ್ಣಾದಪಿಸೆಣೆ, ಚೆಲ್ವಪಣೆ,
ಮೊದಲಾದ ಸೊಬಗಿಂದ ಸೊಗಯಿಸುವ, ಮೆರೆಯುತಿಹ
ಬಾಲಕನ ಲೀಲೆಯಂ ಕಂಡು ಹಿಗ್ಗಿದೆನೊಮ್ಮೆ;
ಲಾಲನೆಗಳಿಲ್ಲೆಂದಳಲ್ದು ಮರುಗಿದೆನೊಮ್ಮೆ!
ಶ್ರೀಹರಿ! ಶ್ರೀ ಕೃಷ್ಣ! ಮಾಧವಾ! ಮುರಹರ!
ಭಕ್ತವತ್ಸಲ ದೀನಬಂಧು, ಬಾಲಕನ
ಕಾಪಾಡು! ತೆರಳುವೆನು ನಿನ್ನ ತೊಡೆಯಲ್ಲಿಟ್ಟು!
ನೀರಡಿಕೆಯಾಗುತಿದೆ, ತಂಗಿ, ಬಾಯಾರಿ
ಗಂಟಲೊಣಗುತ್ತಿಹುದು. ನಾನಿನ್ನು ಬಹುಕಾಲ
ಬದುಕೆ.

[ಕೊಟ್ಟ ನೀರ್ಕುಡಿದು. ಬಿಸುಸುಯ್ದು]

ಅಯ್ಯೊ ನನ್ನ ಮುದ್ದು ಮಗುವೆಲ್ಲಿ?

ರಂಗಸು :—ಹೊರಗೆಲ್ಲಿಯೋ ಆಟವಾಡಲು ಹೋಗಿಹನು.
ಹುಡುಕಿ ನಾ ಕಳುಹಿಸುವೆ. (ಹೊರಡವಳು)

ದಾದಿ :— ಕಂದಾ! ಎನ್ನ
ಜೀವದಾನಂದ! ಎಲ್ಲಿರುವೆ? ಬೇಗ ಬಾ!
ಕಡೆಯಸಲ ನಿನ್ನ ಸಿರಿಮೊಗವ ವೀಕ್ಷಿಸಿ ಮಡಿವೆ.
ಕಡೆಯಸಲ ನಿನ್ನ ನುಣ್ಗದಪ ಮುದ್ದಿಸಿ ಮಡಿವೆ.
ಕಣ್ತುಂಬ ಕಡೆಯಸಲ ನಿನ್ನನವಲೋಕಿಸುವೆ!
ಇದುವರೆಗೆ ನನಗೆ ದಾರಿಯತೋರಿ ನಡೆಸಿದುದು
ನೇಸರಿನ ಬೆಳಕಲ್ಲ, ಮಗುವೆ, ನಿನ್ನ ಕಣ್ಬೆಳಕು!
ಎನಗುಸಿರ ನೀಡಿದುದು ಸಂಚರಿಸ ಎಲರಲ್ಲ,
ನಿನ್ನುಸಿರು ಮುದ್ದುಮಗು! ಇದುವರೆಗೆ ಸಂಜೀವನೆ
ಎನಗೆ ನೆಲವಿತ್ತುದುದು ತಿರೆಯಲ್ಲ ನಿನ್ನೊಲ್ಮೆ!

(ಚಂದ್ರಹಾಸನು ಓಡಿಬರುವನು)

ಬಂದೆಯಾ ಕಂದಾ ಸುಖವಾಗಿ ಆಡಿದೆಯಾ!

ಚಂದ್ರ :—ಅಜ್ಜಿ ನೀನೆನ್ನ ಕೂಗಿದೆಯಾ!

ದಾದಿ :—ನಿನಗಾರು ಹೇಳಿದರು?

ಚಂದ್ರ :—ಯಾರಿಲ್ಲ; ಗಾಳಿ ಮರದಲಿ ಸುಳಿಯೆ
ನೀನೆನ್ನ ಕರೆದಂತೆಯಾಗುವುದು ಅಜ್ಜಿ
ಕೋಗಿಲೆಯು ಕೂಗಿದರು ನಿನ್ನ ನೆನಪಾಗುವುದು.
ಹೊಳೆಯಬಳಿ ನಾನಿಂತು ಸುಳಿಸುಳಿದು ಸುತ್ತಿ
ನೆಗೆನೆಗೆದು ಕಲ್ಲುಗಳ ನೊತ್ತಿ ಮೊರೆ ಮೊರೆವ
ತೆರೆಗಳನು ಕಂಡೊಡಂ, ಕೇಳ್ದೊಡಂ ನಿನ್ನನೇ
ಕಂಡಂತೆ, ಕೇಳ್ದಂತೆಯಾಗುವುದು. ಅದೇಕೆ ಅಜ್ಜಿ?
ನಾನೀಗ ಹೊಳೆಯ ಬಳಿ ಮರಗಳಡಿ ಕೋಗಿಲೆಯು
ನಾಲಿಸುತ ತೆರೆಗಳಾಟವನೋಡಿ ನಲಿಯುತ್ತ
ನಿಂತಿದ್ದೆ. ನೀನೆನ್ನ ಕರೆದಪೋಲಾಯ್ತು!
ಅದಕಾಗಿ ಬೇಗಬೇಗನೆ ಓಡಿಬಂದೆ!

ದಾದಿ :—ಕಂದಾ ಬಳಿಗೆ ಬಾ ಕುಳಿತುಕೋ, ಶ್ರೀಹರಿಯ
ಕೃಪೆ ನಿನ್ನ ಮೇಲಿರಲಿ! (ಚಂದ್ರಹಾಸನು ಹತ್ತಿರಕುಳಿತು)

ಚಂದ್ರ :—(ತೋರಿಸುತ್ತಾ) ನೋಡಮ್ಮ, ಒಟ್ಟಿಯೊಡ
ಮಣ್ಣಾಟವಾಡುತಿರ ಬಟ್ಟಗಲ್ಲೊಂದೆನಗೆ
ದೊರಕಿಹುದು ಸೋಜಿಗದ ಕಲ್ಲಮ್ಮಾ! ರಮಣೀಯ
ವಾಗಿಹುದು. ಕತ್ತಲೆಯ ಕರಗಿಸೆರಕವ ಪೊಯ್ದು
ತೆರದಿಂದೆ ರಾಜಿಪುದು.

ದಾದಿ :—(ನೋಡಿ) ಮಂಗಳದ ಸೂಚನೆಯ
ಹರಳು. ನೀನಿದನಗಲದಾವಗಂ ಪೂಜೆಗೆಯ್
ಮುರಹರನ ಬೆಂಬಲವು, ಕೃಪೆ, ಬಲವು ಎಲ್ಲ
ನಿನಗೆ ದೊರಕುವುದು

ಚಂದ್ರ :— (ತೋರಿಸುತ್ತಾ) ರನ್ನದಲರಿದ ನೀನು
ನೋಡಿದೆಯಾ ಅಜ್ಜಿ.
ದಾದಿ :— (ನೋಡುತ್ತಾ) ಎಲ್ಲಿ ಸಿಕ್ಕಿತು ಕಂದ ?
ಚಂದ್ರ :— ಬೀದಿಯೆಡೆ ನಾವಾಟವಾಡುತಿರೆ ಮಂತ್ರಿ ಸುತೆ
ಮಂತ್ರಿಸುತರವರ ತಂದೆಯ ಕೂಡಿ ಬಂದೆನ್ನ
ಮಾತನಾಡಿಸಿ, ಪೋಕು ಮುನ್ನಮಿದನೆನಗೆ
ಮಂತ್ರಿಸುತೆ, ವಿಷಯೆ ಎಂಬುವ ಬಾಲೆ, ನೀಡಿದಳು.
ದಾದಿ :—(ಸ್ವಗತ ಕಣ್ಣೊರಸುತ್ತಾ) ಹೆರರ ಬಿಕ್ಕೆಗೆ ನೀನು
ಕೈ ನೀಡುವಂತಾಯ್ತೆ
ಕೇರಳೇಂದ್ರನ ಬಸಿರಿನಲಿ ಬಂದು ?
ಚಂದ್ರ :— ಏಕಳುವೆ ?
ನಾನಿದನು ತೆಗೆದುಕೊಂಡುದು ತಪ್ಪೆ ? ಮನ್ನಿಸಮ್ಮಾ,
ಅರಿಯದೆಯೆ ಮಾಡಿದೆನು ಇನ್ನು ಮಾಡುವುದಿಲ್ಲ.
ದಾದಿ :—(ಅವನ ತಲೆ ಸವರುತ್ತಾ) ತಪ್ಪೇನು ಅದರಲ್ಲಿ
ಕಂದಾ, ತಪ್ಪಿಲ್ಲ.
ಚಂದ್ರಾ :—ಅಮ್ಮಾ, ಯಾವಾಗಲೂ ನೀನು ಕಣ್ಣೀರು
ಕರೆಯುತಿಹೆ ; ಏಕೆಂಬುದನು ಅರಿಯೆ! ಹೇಳೆಂದರೂ
ನೀನು ಹೇಳುವುದಿಲ್ಲ. ಕಂಡ ಕಂಡವರೆಲ್ಲ
ನನ್ನ ತಂದೆತಾಯ್ಗಳ ಹೆಸರ ಕೇಳುವರು ?
ಇಂದು ಮಂತ್ರಿಯು ಕೂಡ ಕೇಳಿದನು.
ದಾದಿ :— ಏನಂದೆ ?
ಚಂದ್ರ :— ನಾನರಿಯೆ ಎಂದೆ.
ದಾದಿ :—(ಸ್ವಗತ) ತಿಳಿಯದಿರೆ ಸೊಗವಿರಲು
ತಿಳಿಯುವುದೆ ಮೂಢತನ. ತಿಳಿಸಿದರೆ ಕತ್ತಲೊಳು
ಮಿಂಚು ಹೊಳೆದಂತಹುದು. ನಿನ್ನ ಹಿಂದಿನ ಸಿರಿಯ
ನಿನಗರುಗಿ ನಾನೇಕೆ ಕೊರಗಿಸಲಿ. (ಬಹಿರಂಗ)
ಕಂದಾ,
ಶ್ರೀಹರಿಯೆ ನಿನಗೆ ಪಿತ. ನಿನ್ನನಾತನೆ ಕಾಯ್ದು
ಸಲಹುವನು, ಕಷ್ಟದಲಿ ಕರೆಯುವನ, ಶ್ರೀಹರಿಯ
ನಾಮಗಂ ಮರೆಯದಿರು. ಕೇಡಿಗಳ ಕೂಟದಿಂ
ದೂರವಿರು. ಸಜ್ಜನರ ಸಹವಾಸವನು ಮಾಡು.
ಸಾಧುಗಳ ಸೇವಿಸು. ಪರಹಿತವ ನೆನೆ. ಹೆರರ
ಕೆಡುದೆಸೆಯೊಳುಬ್ಬದಿರು. ಸತ್ಯವನು ಬಿಡಬೇಡ.
ಉಪಕಾರಮಾಡಿದವಗುಪಕಾರ ಮಾಡುವುದು
ಹೆಚ್ಚಲ್ಲ. ಅಪಕಾರವೆಸಗಿದವ ಗುಪಕಾರ
ಮಾಡು. ಬಲದಿಂದ ಗೆಲ್ಲಬಹುದಾದೊಡಂ
ಒಲವಿನಿಂದಲೆ ಗೆಲ್ಲು, ಒಲವಂತ್ಯದಲಿ ಸೋಪು
ಹಿಮ್ಮೆಟ್ಟುವುದು ಮಗುವೆ. ಸಾಲವಮಾಡಲುಬೇಡ,
ಸಾಲನೀಡಲು ಬೇಡ. ಋಣಭಾರಕೆಣೆಯಿಲ್ಲ.
ಕೊಟ್ಟವನ ಕೆಡಿಸುವುದು, ಕೊಂಡವನ ಕೊಲ್ಲುವುದು
ಋಜುಮಾರ್ಗದಿಂದೆಂದು ಹಿಂಜರಿಯಬೇಡ.
ಕ್ಲೇಶಕರವಾದೊಡಂ ಅಡಿಯ ಮುಂದಿಡೆ ಸಗ್ಗ ;
ಅಡಿಯ ಹಿಂದೆಡೆ ನರಕ ; ಎಂಬುದನು ಮರೆಯದಿರು.
ನಿನ್ನಜ್ಜಿಯಾಡಿದೀ ನುಡಿಗಳನು ನಿನ್ನೀ
ಹೃದಯಮಂದಿರದಲ್ಲಿ ಇಟ್ಟು ಪೂಜಿಸು ಮಗುವೆ ;
ಭೂಮಿಯಲಿ ಗಣ್ಯನಾಗುವೆ ನೀನು. ಸಗ್ಗದಲಿ
ಪುಣ್ಯವಂತರ ಗುಂಪಿನಲಿ ಮೆರೆವೆ. ಶ್ರೀಹರಿಯ
ಕೃಪೆಯಿರಲಿ ನಿನಗೆ. ನಾನು ಹೋಗುವೆ ನಿನ್ನು ;
ಚಂದ್ರ :—(ಕಂಬನಿಯ ಸೂಸುತ್ತಾ) ಅಜ್ಜಿ, ನಿನ್ನ ಮಾತನು
ಮೀರೆ. ಒಂದನೂ
ಬಿಡದಂತೆ ಪಾಲಿಸುವೆ. ನನ್ನ ಕಂಬನಿಯಾಣೆ !
ಬಿಟ್ಟೆನ್ನ ಹೋಗದಿರು, ನಿನ್ನ ಮಾತನು ಮೀರೆ,
ಶ್ರೀಹರಿಯಮೇಲಾಣೆ. ಪೊರಮಡುವುದಾವೆಡೆಗೆ ?
ಬೇಕಾದುದೆಲ್ಲವನು ಕಿರಿದಾದರು ತಂದು
ನಿನಗೀವೆ; [ಬಿಕ್ಕಿಬಿಕ್ಕಿ ಅಳುವನು. ದಾದಿಯೂ ಅಳುವಳು]
ದಾದಿ :— ಚಿಕ್ಕಂದಿನಲ್ಲಿಯೇ ಮೃತ್ಯುವಿನ
ಪರಿಚಯವು ನಿನಗಾಗುವಂತಾಯ್ತೆ ? ಕಂದಾ
ಮಾನವನು ಭೂಮಿಯಲಿ ಬಹುಕಾಲ ಬದುಕಿರನು.
ಮುದಿತನವು ಬಂದ ಕೆಲ ದಿನಗಳಲಿ ಶ್ರೀಹರಿಯ
ಪಾದಗಳ ಸೇರುವನು. ನಾನಿನ್ನು ಇರಲಾರೆ.
ಬಾ ಬಳಿಗೆ ಕಂದಾ ಮುತ್ತನೊಂದನು ನೀಡು,
ಸಾವಿನಲಿ ಆ ಸೊಗದ ಸೌಭಾಗ್ಯವೆನಗಿರಲಿ ;
[ಚಂದ್ರಹಾಸನನ್ನು ಬಳಿಗೆ ಕರೆದು ಸೊಗದಮೇಲೆ ಮೊಗ
ವಿಡುವಳು]
ಶ್ರೀಹರಿ! ಭಗವಂತ! ಪರಪರ! ಪರಮಾತ್ಮ !
(ಸಾಯುವಳು)
ಚಂದ್ರ :—(ಹಾಗೆಯೇ ಕುಳಿತು, ದಾದಿಯ ಮುಖವನ್ನು
ದೃಷ್ಟಿಸುತ್ತಾ ಹೆದರಿಕೆಯಿಂದ)
ಅಜ್ಜಿ! ಮಾತಾಡು. ಕತ್ತಲಾಗುವುದೆನಗೆ ಭಯ !
ಹಣತೆಯನು ಹೊತ್ತಿಸುವುದಿಲ್ಲವೇ ಇಂದು ?
ಅಡಿಗೆ ಮಾಡಲು ನಾನು ಬೆಂಕಿಯನು ಮಾಡಲೇ ?
ನೀರು ತರಬೇಕೇನು ಹೇಳು ಅಜ್ಜಿ ! ಅಜ್ಜಿ ! [ಅಳುವನು]
[ಭೀಷಣನೇ ಮೊದಲಾದ ಚಂಡಾಲರು ಬರುವರು]
ಅಜ್ಜೀ! ಯಾರೂ ಬಂದರು ಅಜ್ಜಿ. ಅಜ್ಜೀ ;
[ಚಂದ್ರಹಾಸನು ಹೆದರಿ ಕೂಗಿ ದಾದಿಯನ್ನು ಅಪ್ಪಿಕೊಂ
ಡು ಮೂರ್ಛೆ ಹೋಗುವನು]

ಭೀಷಣ :—ಹುಡುಕಿ ಸಾಕಾಯ್ತು. ಇವನಿಗೆಷ್ಟು ಅಲೆಯುವುದು ? ಬಾಯಿಲ್ಲಿ ಮಾರ, ಎತ್ತಿಕೋ ;

ಮಾರ :—ಇವನ ಕೊಲೆಗೆ ನಾವೇಕೆ ನಮ್ಮ ಹುಡುಗರೇ ಸಾಕಿತ್ತು.

ಕಾಳ :—ಕೈಯುಗರ ಕೆಲಸಕ್ಕೆ ಕೊಡಲಿ ತಂದಂತೆ !

ಮಾರ :—(ಚಂದ್ರಹಾಸನನ್ನು ಎಳೆಯುತ್ತಾ) ಬಲವಾಗಿ ಹಿಡಿದಿದ್ದಾನೆ ಮುದುಕಿಯನ್ನು !

ಎಳೆಯೋ ಸಾಕು. (ಎಂದು ಚಂದ್ರಹಾಸನನ್ನು ಈಚೆಗೆ ಎಳೆದು ಅವನು ಮೂರ್ಛಿತನಾದುದನ್ನು ಕಂಡು) ಓಹೋ ನಮ್ಮ ರೂಪವೇ ಸಾಕು ಇವನ ಕೊಲೆಗೆ!

ಕತ್ತಿಗಳನ್ನೇಕೆ ಕೆಡಿಸುವುದು. ? (ಎಂದು ಹೇಳಿ ಎತ್ತಿಕೊಳ್ಳುವನು)

ಕಾಳ .—ಏನುಕಾಲ ಕಂಡಿದ್ದಾಳೋ, ಈ ಮುದುಕಿ. ಇನ್ನೂ ಮಲಗಿದ್ದಾಳಲ್ಲಾ. ಇಂದಿನ ನಮ್ಮ ಕಾರ್ಯಕ್ಕೆ ತೊಂದರೆಯೇ ಇಲ್ಲ. ಒಳ್ಳೆಯ ಗಳಿಗೆಯಲ್ಲಿ ಹೊರಟಿವೆಂದು ತೋರುತ್ತದೆ.

ಭೀಷಣ :—ಇರಿ, ಅವಳೆದೆಯ. (ಕಾಳ ಇರಿಯುವನು) ಚೆನ್ನಾಗಿ ! ಚೆನ್ನಾಗಿ !

ಮಾರ :—ಯಾವ ಬನಕಿವನನೊಯ್ಯೋಣ ?

ಕಾಳ :—ವರ್ತಕನ ಕೊಲೆಮಾಡಿದಾವನಕ್ಕೇ ಒಯ್ಯೋಣ !

ಭೀಷಣ :—ಬೇಡ, ಮಂತ್ರಿಯ ಮಾತಿನಂತೆ ಹಿಂದಿನ ಸೈನ್ಯಾಧಿಕಾರಿಯನು ಕತ್ತರಿಸಿದೆವಲ್ಲಾ ಆ ಕಾಡಿಗೆ ; ಬೇಗ ನಡೆಯಿರಿ !

ಮಾರ :—ಮಲ್ಲಿಗೆಯ ಹೂವಿನಂತಿಹನು ಹುಡುಗ !

ಕಾಳ :—ಏಕೋ ಗೂಬೆ ಕೂಗುವುದಲ್ಲ !

ಮಾರ :—ಹೌದು ಕೇಳಲ್ಲಿ ಬಳ್ಳೊರಲ ತಿದಿ ! ಅಪಶಕುನಗಳಪ್ಪ. ಮಾಕಾಳಿ ! ಚಂಡಿ ! ಚಾಮುಂಡಿ !

ಭೀಷಣ :—ಎಂಥಾ ಮೂಢರೋ ನೀವು ! ನಡೆಯಿರಿ ಬೇಗ !

[ಹೋಗುತ್ತಾ ಭೀಷಣನು ಮುಗ್ಗರಿಸಿ ಬಿದ್ದು ಹೋಗುವನು] (ಪರದೆ ಬೀಳುವುದು)

## ದೃಶ್ಯ ೪

[ಕುಂತಳನಗರಕ್ಕೆಅತಿದೂರವಾದ ಒಂದು ಗೊಂಡಾರಣ್ಯ. ಕಗ್ಗತ್ತಲು. ಚಂದ್ರಹಾಸನನ್ನು ನೆಲದಮೇಲೆ ಮಲಗಿಸಿ ಮೂವರು ಚಂಡಾಲರು ನಿಂತಿದ್ದಾರೆ. ಒಬ್ಬನ ಕೈಲಿ ದೀವಿಗೆ ಇದೆ. ಇನ್ನಿಬ್ಬರು ಕತ್ತಿಗಳನ್ನು ಹಿಡಿದಿದ್ದಾರೆ,]

ಕಾಳ :—ನೀನು ನೋಡಿದೆಯೇನು, ಭೀಷಣ ?

ಭೀಷಣ :— ಇಲ್ಲ, ನಾನೋಡಲಿಲ್ಲ.

ಕಾಳ :—(ಮಾರನ ಕಡೆ ತಿರುಗಿ) ನೀನು ?

ಮಾರ :—ನನಗೇನೋ ಕಂಡಹಾಗಾಯ್ತು !

ಕಾಳ :—ನಾನು ದೀವಿಗೆ ಹಿಡಿದು ಮುಂದೆ ಬರುತ್ತಿದ್ದೆ. ದೂರದಲ್ಲಿ ದೀವಿಗೆಯ ಬೆಳಕಿನಲ್ಲಿ ಒಂದು ಭಯಂಕರಾಕಾರವು ನಮ್ಮ ಮುಂದೆಯೇ ನಡೆದು ಹೋಗುವಂತೆ ಕಾಣುತ್ತಿತ್ತು ನಿಮ್ಮನ್ನು ಕರೆದು ತೋರಿಸಬೇಕು ಎನ್ನುವಷ್ಟರಲ್ಲಿ ಮಾಯವಾಗುತ್ತಿತ್ತು.

ಮಾರ :—ಎಂಥಾ ರೂಪ?

ಕಾಳ :—ಒಂದು ಹೆಂಗಸಿನ ಆಕಾರವಪ್ಪಾ ! ಮುಡಿಗೆದರಿಕೊಂಡಿತ್ತು.

ಭೀಷಣ:—ನಾನು ಹಿಂದೆ ಬರುತ್ತಿದ್ದೆನಷ್ಟೆ ? ಆಗಾಗ್ಗೆ ಏನೋ ಒಂದು ಹಿಂದಿನಿಂದ ಎಳೆದ ಹಾಗಾಗುತ್ತಿತ್ತು. ತಿರುಗಿ ನೋಡಿದಾಗ ಏನೂ ಕಾಣಿಸುತ್ತಿರಲಿಲ್ಲ. ನನಗೆಂದೂ ಹೀಗಾಗಿರಲಿಲ್ಲ. ನಿಮಗೇ ಗೊತ್ತು ನಾನೇನು ದೆವ್ವಗಳಿಗೆ ಹೆದರುವವನಲ್ಲವೆಂದು ಹೋಗಲಿ ನಮ್ಮ ಕೆಲಸ ಪೂರೈಸಿಬಿಡೋಣ.

ಚಂದ್ರ :—(ಅರೆನಿದ್ದೆಯಲ್ಲಿ) ಅಜ್ಜೀ ! ಅಜ್ಜೀ !

ಭೀಷಣ :—ಅಲ್ಲಿಗೆ ! ಅಲ್ಲಿಗೆ ಕಳುಹಿಸಲು ರಥಕ್ಕೆ ಹೇಳಿ ಕಳುಹಿಸಿದ್ದೇವೆ. ಒರಲುಬೇಡ ಜೋಕೆ !

ಚಂದ್ರ :—(ಎದ್ದು ಕೂತುಕೊಂಡು ಸುತ್ತಲೂ ಭಯದ ದೃಷ್ಟಿಯನ್ನಟ್ಟಿ)

ಶ್ರೀಹರಿ ! ಮುರಹರ ! ಕೃಷ್ಣ ! ಖಗರಾಜಗಮನ !

ಭೀಷಣ :—ಒರಲುಬೇಡವೊ, ಪಾಪಿ !

ಚಂದ್ರ :—ನನ್ನನೇಕಿಲ್ಲಿಗೆಳತಂದಿರುವಿರಿ ?

ಮಾರ :—ಇಲ್ಲಿ ನೋಡು, ಏಕೆಂದು ತಿಳಿಯುವುದು (ಖಡ್ಗವನ್ನು ತೋರುವನು)

ಚಂದ್ರ :—ಅಪ್ಪಾ ! ನಿಮಗೆ ನಾನೇನು ಮಾಡಿದೆ. ನೋಯಿಸದಿರೆನ್ನ ! ನನ್ನಜ್ಜಿ ಇರುನೆಡೆಗೆ ಕರದೊಯ್ಯಿರೆನ್ನ

ಕಾಳ :—ಅಲ್ಲಿಗೇ ಹೋಗುವೆ ಹೆದರಬೇಡ ! ಮಾರ, ಈ ಹುಡುಗನಂಥಾ ಸುಂದರ ಪುರುಷನನ್ನು ನಾನೆಲ್ಲಿಯೂ ಕಂಡಿಲ್ಲ.

ಮಾರ :—ನನಗೇಕೋ ಎದೆ ಮರುಗುತಿಹುದಪ್ಪಾ !

ಭೀಷಣ :—ಸಾಕು ಬಿಡಿ, ನಿಮ್ಮ ರಸಿಕತೆ. ಕೆಲಸವನ್ನು ಬೇಗ ಪೂರೈಸಿ ಹಿಂತಿರುಗೋಣ ನಿದ್ದೆ ಬರುವುದೆನಗೆ !

ಚಂದ್ರ:—ಶ್ರೀಹರಿ ! ಮುರಹರ ! ಕೃಷ್ಣ ! ಖಗರಾಜಗಮನ !

ಕಾಳ :—ಏ, ಬೈಯುತಿಹೆಯಾ ನಮ್ಮ ?

ಚಂದ್ರ :—ಇಲ್ಲ, ದಮ್ಮಯ್ಯ ; ನಿಮ್ಮನ್ನು ನಾ ಬಯ್ಯಲಿಲ್ಲ. ಶ್ರೀಹರಿಯ ಕರೆದೆ ? ನನ್ನನ್ನು ಕೊಲೆಮಾಡಬೇಡಿರಪ್ಪಾ ? ನಿನ್ನ ಮನೆಯಲ್ಲಿದ್ದು ಹೇಳಿದ ಕೆಲಸ ಮಾಡುವೆ.

ಮಾರ :—ಕರೆ, ಕರೆ, ಶ್ರೀ ಹರಿಯು ; ಬಂದವನು ಕಾಪಾಡಲಿ ನೋಡೋಣ. (ಫಕ್ಕನೆ ಹಿಂತಿರುಗಿ) ಯಾರೋ ನನ್ನ ಬೆನ್ನಿನಮೇಲೆ ಹೊಡೆದವರು ?

ಭೀಷಣ :—ನಿನಗೇನು ಮರುಳೋ ? ಹೆದರಿ ಸಾಯುವೆಯಲ್ಲಾ !

ಮಾರ :—ಇಲ್ಲ, ನಿಜವಾಗಿಯೂ ಯಾರೋ ಹೊಡೆದಹಾಗಾಯ್ತು !

ಭೀಷಣ :—ಈಗಲ್ಲ ; ಇವನ ಕೊಲ್ಲದೆ ಬಿಟ್ಟರೆ ಮುಂದೆ ಹಾಗಾಗುವುದು.

ಮಾರ :—ನಾನೊಲ್ಲೆ ಕೊಲ್ಲುವುದಕ್ಕೆ ನನಗೇನೋ ಹೆದರಿಕೆ. ಯಾರು ಬೇಕಾದರೂ ಕೊಲ್ಲಿ !

ಭೀಷಣ :—ಇಂದು ನೀನೆ ಕೊಲ್ಲಬೇಕು ! ನನ್ನಾಜ್ಞೆ.

ಮಾರ :—ಕಾಳ ಕೊಲ್ಲಲಿ !

ಕಾಳ :—ನಾನೊಲ್ಲೆ. ನೀನೆ ಕೊಲ್ಲು.

ಭೀಷಣ:-(ಸಿಟ್ಟಿನಿಂದ) ಇದೇನು ಹುಡುಗಾಟ. ಕಡಿ, ಮಾರ!

[ಮಾರನು ಕತ್ತಿಯನ್ನೆತ್ತುವನು]

ಚಂದ್ರ :—ದಮ್ಮಯ್ಯ ! ಕೊಲ್ಲಬೇಡಪ್ಪಾ ! ತಂದೆ, ಕೊಲ್ಲಬೇಡಪ್ಪಾ! ಶ್ರೀಹರಿ! ದೀನಬಂಧು! ಭಕ್ತವತ್ಸಲ ! ಕೃಷ್ಣ!

ಮಾರ:—(ಎತ್ತಿದ ಕತ್ತಿಯನ್ನು ಹಾಗೆಯೇ ಹಿಡಿದುಕೊಂಡು) ಏನಿದು ? ಕತ್ತಿ ಕೆಳಗಿಳಿಯುವುದೇ ಇಲ್ಲ! ಯಾರೋ ಹಿಡಿದಂತಿಹುದು.

ಭೀಷಣ :—ತಡವೇಕೆ ? ಹೊಯ್ ! ಮಾರ, ಹೊಯ್ !

ಮಾರ :—ನನ್ನಿಂದಾಗದು. ನನ್ನಿಂದಾಗದು ( ಅಳುವನು ) ಆ ಹಾಳು ದುಷ್ಟಬುದ್ಧಿಯ ಸೇವೆ ಸಾಕಿಂದಿಗೆ.

ಭೀಷಣ :—ಮಾರ, ನೀನಿಷ್ಟು ಹೇಡಿಯೆಂದು ನಾನು ತಿಳಿದಿರಲಿಲ್ಲ. ಕಾಳ, ಮಾರನ ಕೈಲಿ ಕೊಡು ದೀವಿಗೆಯ. ಹೊಯ್ ಬೇಗ !

ಮಾರ :— ( ದೀವಿಗೆಯನ್ನು ತೆಗೆದುಕೊಳ್ಳುತ್ತಾ ) ನನ್ನ ಮಗನ ನೆನಪಾಗುವುದು ನನಗೆ.

[ಕಾಳನು ಕತ್ತಿಯನ್ನೆತ್ತುವನು]

ಚಂದ್ರ :—ಶ್ರೀಹರಿ ! ಶ್ರೀ ಕೃಷ್ಣ ! ಪರಮಾತ್ಮ ! ವೈಕುಂಠ !

ಕಾಳ :— ನನ್ನಿಂದಾಗದು. ಕೂರಸಿಯು ಇಳಿಯುವುದೇ ಇಲ್ಲ. ನಾ ಮೊದಲೆ ಹೇಳಲಿಲ್ಲವೇ ? ಬೇಡಪ್ಪಾ ನಮಗೀ ಕೆಲಸ ಎಂದು ! ಆ ಕೊಲೆಪಾತಕ, ನೀಚ, ದುಷ್ಟಬುದ್ಧಿ ! ಅವನ ಮಾತು ಕೇಳಿ ನಾವೇಕೆ ಕೆಡುವುದು ?

ಭೀಷಣ :—(ಸಿಟ್ಟಿನಿಂದ) ಕೊಡು, ಇಲ್ಲಿ ಕತ್ತಿಯ. ಅವನೇನೋ ಮಂತ್ರ ಹೇಳುವನು. ಹೇಳದಂತೆ ಬಾಯಿಗೆ ಬಟ್ಟೆಕಟ್ಟಿ.

ಕಾಳ :—ಏನಾದರೂ ಸಾಯಲಿ ! (ಎಂದು ಬಟ್ಟೆಕಟ್ಟುವನು)

(ಭೀಷಣನು ಕತ್ತಿಯೆತ್ತಲು ಚಂದ್ರಹಾಸನು ಕೈಮುಗಿಯುವನು)

ಭೀಷಣ :—ಏನಿದು ? ಇನ್ನಾದರೂ ಕತ್ತಿ ಕೆಳಗಿಳಿಯದು ! ಅಯ್ಯೋ ! ಆ ಹಾಳು ಕುಮಂತ್ರಿಯ ಮಾತು ಕೇಳಿ ಕೆಟ್ಟೆವಲ್ಲಾ ! ಬಾಯ್ಗೆ ಕಟ್ಟಿದ ಬಟ್ಟೆ ಬಿಚ್ಚು, ಮಾರ.

(ಮಾರನು ಸಂತಸದಿಂದ ಬಟ್ಟೆ ಬಿಚ್ಚುವನು. ಚಂದ್ರಹಾಸನು ಶ್ರೀಹರಿ, ಎನ್ನುತ್ತ ಎದ್ದು ನಿಲ್ಲುವನು. ಮಾರನು ಕಾಲಿಗೆ ಬೀಳುವನು)

ಮಾರ :—(ಎದ್ದು) ನೋಡಿದಿರಾ ಇವನ ಕಾಲಿನಲ್ಲಿ ಆರು ಬೆರಳುಗಳಿವೆ

ಭೀಷಣ :—ಎಲ್ಲ ? ಎಲ್ಲಿ? (ಎಲ್ಲರೂ ನೋಡುವರು)

ಏನಾದರೂ ಕುರುಪು ತೆಗೆದುಕೊಂಡು ಹೋದರಾಯ್ತು ; ಇಲ್ಲದಿದ್ದರೆ ನಮಗಂತೂ ಉಳಿಗಾಲವಿಲ್ಲ. ಮಾರಿಯೇ ಕೊಟ್ಟಳು ! ಈ ಆರನೆಯ ಬೆರಳನ್ನು ಕೊಯ್ದು ತೆಗೆದುಕೊಂಡು ಹೋಗಿ ತೋರಿಸೋಣ.

ಮಾರ :—ಹೌದೌದು ! (ಭೀಷಣನು ಬೆರಳನ್ನು ಸರಕ್ಕನೆ ಕೊಯ್ಯುವನು. ಚಂದ್ರಹಾಸನು ಚೀರುವನು)

ಚಂದ್ರ :—ಶ್ರೀಹರಿ ! ಮುರಹರ ! ವೈಕುಂಠ ! ಪರಮಾತ್ಮ! ಅನಾಥರಕ್ಷಕ ! ದೀನಬಂಧು !

[ಅಶರೀರ ವಾಣಿಯೊಂದು "ಹೆದರದಿರು ! ಹೆದರದಿರು. ನಾನಿಹೆನು ! ಹೆದರದಿರು ! " ಎಂದು ಕೇಳಿಸುವುದು. ಚಂಡಾಲರು ಬೆದರಿ ಓಡುವರು. ಪುನಃ ಅಶರೀರ ವಾಣಿಯ ಮಧುರ ಗಾನವು ಕೇಳಿಸುವುದು.]

" ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ | ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ "

(ಪರದೆ ಬೀಳುವುದು)

## ದೃಶ್ಯ ೫

[ ಅದೇ ಅರಣ್ಯದ ಮತ್ತೊಂದು ಭಾಗ. ಮರುದಿನ ಸೂರ್ಯೋದಯವಾದಮೇಲೆ ಪುಳಿಂದರ ಪಡೆಯೊಂದು ಬೇಟೆಯಾಡುತ್ತ ಬರುವುದು ]

ಗಸೇ ಪುಳಿಂದಾ :—(ನೆಲವನ್ನು ಪರೀಕ್ಷಿಸುತ್ತ)

ಇದೆ ಪಂದಿ ಕದರಿದ ನೆಲಂ !

೨ನೇ :—ನೋಡಲಿದೆ ದಂತಿ ಕದಡಿದ ಕೊಳಂ !

೩ನೇ :—ತೋರಲಿದೆ ಪುಲಿಯುಗಿದ ಮೃಗದ ಮಿದುಳು !

೪ನೇ :—ಇತ್ತಲಿದೆ ಸಿಂಗಮೊರಗಿದಾನೆಯ ತಲೆಯ ಮುತ್ತು ದುರಿ ನೆತ್ತರೊಡನೆ !

೫ನೇ :—ಇದೆ ವನಮಹಿಷನುದ್ದಿ ಕೊಂಡ ಮರದಿಗುಡು !

೭ನೇ :—ಇತ್ತಲಿದೆಕೋ ಸಾರಂಗಮಿಕ್ಕಡಿಗೈದ ಪಾವು !

೪ನೇ :—ಇತ ಲಿದೆ ಪುಲ್ಲೆಗಳ ಪಕ್ಕೆ ! ಮೆರಿಗಳಿಕ್ಕೆ !

೧ನೇ :—ನಡೆ !

೨ನೇ :— ಪಜ್ಜೆ ವಿಡಿ ಪೋಗು !

೭ನೇ :— ತಡೆ ನಿಲ್ಲು !

೩ನೇ :— ಜಡಿ, ಬೊಬ್ಬೆಗುಡು ! ಪೊದರೊಳಡಗು !

೫ನೇ :— ಕೈಗಿಡದಿರಿಸು !

೪ನೇ :— ನಿಡುಸರಳ ತುಡು !

೧ನೇ :— ಕೆಲಕೆಸಿಡಿಯದಿರ್ಪೊಡೆ ಸಾರ್ಗೆ !

೭ನೇ :— ತುಡುಕು ! ಮೊಗಸು ! ಅಡಗು !

೪ನೇ :— ಮರಕಡರು, ಒಡರ್ಚು !

೩ನೇ :— ಅಡಿಗಿ ಪೊಯ್ !

೧ನೇ :— ಜಡಿ, ಕೊಲನಿಡು !

೨ನೇ :— [೨, ೫, ೭ನೇ ಪುಳಿಂದರು ಓಡುವರು]

೧ನೇ :— ನಮ್ಮ ದೊರೆ, ಕುಳಿಂದಕನೆಲ್ಲ ?

೪ನೇ :— ಕುದರೆಯೇರೋಡಿದಂ ಹರಿಣನಂ ಬೆಂಬತ್ತಿ !

೩ನೇ :— ಸಿಂಹನೊಂದಂ ಕೊಂಡಂ !

೪ನೇ :— ಪುಳಿಂದಿಯರ ಗುಂಪೆಲ್ಲಿ ?

೧ನೇ :— ಎಲ್ಲಿಯೋ ನಾಕಾಣೆ !
ಬಡನಡುವಿನಬಲೆಯರು ನಮ್ಮೊಡನೆ ಎಷ್ಟು ದೂರ
ಬಂದಾರು ? ಮುಕ್ತಾಫಲಂಗಳಂ, ಗರಿಗಳಂ,
ಚಮರಿವಾಲಂಗಳಂ ಆಯುತ್ತ ಎಲ್ಲಿಹರೊ ?

೩ನೇ :—
ಪುಲಿಯೊಂದು ಹಾರೆನ್ನ ಕೊಲ್ಲುವುದರಲ್ಲಿತ್ತು !
ನೋಡಿಲ್ಲಿ ನೆತ್ತರೊಸರುವ ಗಾಯ ! (ತೋರಿಸುವನು)
ನೃಪನೆಚ್ಚ
ಶರದಿಂದ ಮಡಿದುದದು ! ಏನು ಕೈಚಳಕ !

೪ನೇ :—
ಹರಿಯೊಂದು ಬಾಯ್ದೆರೆದು ಅಬ್ಬರಿಸಿ ಬಂತೆನ್ನ
ಕೊಲಲೆಂದು, ಕೊಡಲಿಯಿಂದಿಕ್ಕಿದೆಂ. ಕತ್ತರಿಸಿ
ಬಿತ್ತಿಳೆಗೆ. ಈ ದಿನದ ಬೇಟೆಯೋ ಬೇಂಟೆ !

೧ನೇ :— ಬೇಂಟೆಯೋ ಬಿನದಂಗಳರಸಲ್ತೆ ?
[ಒಳಗಿನಿಂದ "ಪುಲಿ ! ಪುಲಿ ! ಸತ್ತೆಂ ! ಸತ್ತೆಂ!" ಎಂಬ ಕೂಗು-ಜಡಿ, ಬಡಿ, ಪೊಡೆ ಎಂಬ ಕೂಗು ಕೇಳಿಬರುವುವು]

೪ನೇ :— ಏನದಾ ಸದ್ದು ?

೩ನೇ :— ಆವನೋ ಪುಲಿಯಿಂದ ಮಡಿದಂ !

೧ನೇ :—ಮರುಪುಟ್ಟಿನಲ್ಲವಗೆ ದೊರಕುವುದು ದೊರೆತನಂ !
(೭ನೇ ಪುಳಿಂದನು ಓಡಿಬರುವನು)

೭ನೇ :—ಇಲ್ಲೇನು ಮಾಡುವಿರಿ ? ನರಸನಳಿದಂ
ಪುಲಿಯಿಂದ ; ತಿಮ್ಮನಿರಿದದಾ ಕೊಂದ
ದೊಡ್ಡ ಪುಲಿ ! ಬೇಗ ಬನ್ನಿ ! ಓಡಿ ಬನ್ನಿ !
ನಮ್ಮರಸನನ್ನರಸಿ ಬೇಡಿಂಗ ತೆರಳೋಣ !
[ಎಲ್ಲರೂ ಓಡುವರು. ಪರದೆ ಬೀಳುವುದು]

## ದೃಶ್ಯ ೬

[ಅರಣ್ಯದ ಮತ್ತೊಂದು ಭಾಗ. ನಾಲ್ಕು ಜನ ಪುಳಿಂದಿಯರ ಗುಂಪು ಬರುವದು]

೧ನೇ ಪುಳಿಂದ :—(ನೆಲದ ಕಡೆ ನೋಡಿ ಓಡುತ್ತಾ) ನೋಡಲ್ಲಿ, ಕರಿಯ ಕುಂಬಸಳದ ಮುಕ್ತಾಫಲಾಳಿ (ಎಲ್ಲರೂ ಓಡಿ ಆಯ್ದು ತುಂಬುವರು)

೨ನೇ ಪುಳಿಂದ :—ಎನಿತಾಸೆ ನಿನಗೆ ! ಕೀಳ್ಬಗೆಯ ಹೆಣ್ಣು !

೩ನೇ :—ನೀನಾರ್ಗೆ ಕೇಳುವಳ್ !

೪ನೇ :— ನೋಡಿಲ್ಲಿ ! ಬರುಹಿಗಳ
ಗರಿಗಳಿಹವಿಲ್ಲಿ ! ಬನ್ನಿ ಬೇಗಾಯೋಣ !
ಗಂಡಸರ ಗುಂಪೆಲ್ಲಿಹದೊ ಎನೊ. ಬೇಗವರ
ಸೇರೋಣ !

೧ನೇ :— ನಿನಗೆನಿತು ಮೃಗಸಾರ ಮೃತ್ತಿಕೆಯು
ಸಿಕ್ಕಿಹುದೆ ?

೪ನೇ :— ಒಂದು ಕುಡಿಕೆಯು ತುಂಬ !

೧ನೇ :— ನೃಪ ಪತ್ನಿ
ಬೆಸಸಿಹಳು ತನಗಿನಿತು ಬೇಕೆಂದು !

೩ನೇ :— ಹೂವುಗಳು
ಬೇಕಂತೆ. ಯಾವುದೋ ವ್ರತವಂತೆ

೨ನೇ :—ಸೌಭಾಗ್ಯವೇನಿದ್ದರೇನಂತೆ, ಸುತರಿಲ್ಲ.
ನೀರಿರ್ದಕಾಸಾರಕರವಿಂದಮಿಲ್ಲದೊಡೆ
ತಾರಕೆಗಳಿರ್ದ ಗಗನಕೆ ಚಂದ್ರನಿಲ್ಲದೊಡೆ
ಚಾರುಯೌವನಮಿರ್ದ ಪೆಣ್ಗೆ ನಿಯನಿಲ್ಲದೊಡೆ
ಸನ್ನುತ ಪ್ರಜೆಗಳಿಂ ರಮಣೀಯಮಾಗಿರ್ಪ
ಧಾರಿಣಿಗೆ ಧರ್ಮದರಸಿಲ್ಲದೊಡೆ, ಸಿರಿಯಿರ್ದ
ದಾರವಂಶಕೆ ಕುವರನಿಲ್ಲದೊಡೆ ಮೆರೆದಪುದೆ !

೪ನೇ :—ಪುತ್ರವತಿಯಹುದು ಜನ್ಮಾಂತರದ ಪುಣ್ಯ ಮೈಸಲೆ ಪೆಣ್ಗೆ! ಮುನ್ನೆತಾಂ ನೋಂತುದಲ್ಲದೆ ಬರಿದೆ
ಬಯಸಿದೊಡೆ ಬಂದಪುದೆ ತಾಯಾಗುವ ಪುಣ್ಯ ?

೨ನೇ :—ಪುತ್ರಸೌರ್ವನ ಪಡೆಯಲೆಂದೇ ವ್ರತವ ಕೈ
ಕೊಂಡಿಹಳು. ಅದಕಾಗಿ ಫಲ ಪುಷ್ಪಗಳ ತರಲು
ಬೆಸಸಿದಳು.

೧ನೇ :— ಮೇಧಾವಿನಿಯು ನಮ್ಮ ಮಾರಾಣಿ
ಆಕೆಗೆಂದಾಗುವುದೊ ಶುಭದ ಪುತ್ರೋತ್ಸವಂ
ಅಂದೆಮ್ಮ ಸೌಭಾಗ್ಯಕೆಣೆಯಿಲ್ಲ. ಬೇಕಾದ
ಹೂಗಳನು ಕುಯ್ದು ವಳಿಗೊಯ್ಯೋಣ! ಸಂಪಗೆಯು
ನಾ ಕೊಯ್ವೆ!

೨ನೇ :— ಸುರಗಿಯಂ ನಾಕೊಯ್ವೆ!

೩ನೇ :— ಕೇದಗೆಯು
ನಾನು!

೪ನೇ :— ನಾನೆಲ್ಲವಂ ಕೊಯ್ವೆ!

೧ನೇ :— ತಂಗಿ, ನೋಡಲ್ಲಿ!
ಮಿಂಚಿನೋಟವ ಮುಂಚಿ ಹಾರುತಿಹ ಹರಿಣನಂ
ಬೆನ್ನಟ್ಟಿಯೋಡುತಿಹ ಸೌರ್ವ ಬೇಂಟೆಗಾರಂ

(ಎಲ್ಲರೂ ವಿಸ್ಮಯದಿಂದ ನೋಡುವರು)

೩ನೇ :—ನಮ್ಮ ದೊರೆಯವನು!

೨ನೇ :— ಅವನಲ್ಲದಿನ್ನಾರು
ಜಿಂಕೆಯಂ ಬೆನ್ನಟ್ಟಿಯೋಡುವರು?

೪ನೇ :— ನೋಡಕ್ಕ!
ಮರಯೆಂತು ಕೊಂಕುಗೊರಲಂ ಗೆಯ್ದು ಹಿಂತಿರುಗಿ
ನೋಡುತ್ತ ಹಾರುತಿದೆ!

೩ನೇ :— ಆಹಾ! ಅದರಡಿಗಳೆಳೆಯುವೋ
ಲಿಕದಂತೆ ಚಲಿಸುತಿವೆ.

೧ನೇ :— ನಮ್ಮ ಕಡೆ ತಿರುಗುತಿದೆ
ಸಾರಂಗ!

೨ನೇ :— ನೋಡದರ ಬಾಯಲ್ಲಿ ಜೊಲ್ಲ ನೊರೆ
ಸುರಿಯುತಿದೆ.

೪ನೇ :— ನೋಡದರ ಅಳ್ಳೆಯೆಂತುಬ್ಬುತಿದೆ!
ತಗ್ಗುತಿದೆ! ಕಣ್ಣೆಂತು ಚಲಿಸುತಿವೆ ಭಯದಿಂದ!

೩ನೇ :— ಬೆನ್ನಟ್ಟಿ ಬಂದನು ಕುಳಿಂದಕ ನೃಪ!
ಬಿಲ್ಲಿನೊಳು ಬಾಣವಂ ಹೂಡಿಹನದೆಂತು?

[ಕುಳಿಂದಕನು ಬಿಲ್ಲು ಬಾಣಂಗಳಂ ಪಿಡಿದು ಓಡಿಬರುವನು]

ಕುಳಿಂದ :—ಎಲ್ಲಡಗಿತಾ ಜಿಂಕೆ? ಎಚ್ಚಲಗ ಲೆಕ್ಕಿಸದೆ
ಮರೆಯಾಯ್ತೆ ಕಂಗಳಿಗೆ? ನಾಲ್ಕೈದು ಹರಿದಾರಿ
ಬೆನ್ನಟ್ಟಿ ಬಂದುದು ಬರಿದಾಯ್ತೆ?

[ಪುಳಿಂದಿಯರನ್ನು ಕಂಡು]

ಎಲ್ಲಡಗಿ
ತಾಜಿಂಕೆ. ಕಂಡಿರೇ ನೀವು?

೧ನೇ :— (ಕೈ ತೋರಿಸಿ) ಈ ಬಿಕ್ಕೆ
ನಲ್ಲೋಡಿತತ್ತ ವೇಗದಿಂದ. ಮೈಯಿಂದ
ನೆತ್ತರಿಳಿಯುತಲಿತ್ತು!

ಕುಳಿಂದಕ :— ಇರಲಿ, ನೋಡುವೆನು!

[ಓಡುವನು]

೨ನೇ ಪುಳಿಂದ :—
ಎರಳೆಯನ್ನರಿಯದೇ ಬಿಡುವನೆಂದರಿತಿಹೆಯಾ?
ಹಿಡಿಯದೆ ಹೊಟ್ಟೆಯ ಹೊಕ್ಕರೂ ಬಿಡನು!

೪ನೇ :—ಬನ್ನಿ, ಹೊತ್ತಾಯ್ತು! ಚುರುಕಾಗಿ ಹೋಗೋಣ!

೩ನೇ :—ಓಡಲೇಂ ನೀಂ ಗಂಡೇ?

೨ನೇ :— ಗಂಡಸರ ಮಾರಿಹಳು
ಅವಳು!

೪ನೇ :— ಸಾಕು, ಬಿಡಿ, ಬನ್ನಿ ಬೇಗ! (ತೆರಳುವರು)

[ಪರದೆ ಬೀಳುವುದು]

## ದೃಶ್ಯ ೭

[ಅರಣ್ಯ. ಚಂದ್ರಹಾಸನು ಕಾಲ್ಬೆರಳ ನೋವಿನಿಂದ ಅಳುತ್ತಾ ಶ್ರೀಹರಿಯನ್ನು ನೆನೆಯುತ್ತಿರುವನು]

ಚಂದ್ರ :—
ಜಯ ಚತುರ್ಮುಖ ಜನಕ, ಜಯ ಚಾರುಚರಿತ್ರ,
ಜಯ ಚಿದಾನಂದ, ಜಯ ಚೀರಾಂಬರಜ್ಞೇಯ,
ಜಯ ಜಯಚ್ಯುತಿ ದೂರ ಜಯ ಚೂಡಬರ್ಹ ಶೋಭಿತ
ಚೇತನ ಸ್ವರೂಪ,
ಜಯ ಚೈದ್ಯಮದನ, ಜಯ ಚೋದಿತಾಖಿಳಲೋಕ
ಜಯ ಚೌರ್ಯಕೃತ ಶೀಲ ಜಯ ಚಂಡಶಿತ ಕಿರಣ
ಜಯ ಚಕ್ರಧರ ಕೃಪಾಕರ ಕೃಷ್ಣ ಕಮಲಾಕ್ಷ
ಬಿಡಿಸೆನ್ನ ನೋವಿನಿಂದ!
ಜೇಯ, ಜಗದಂತರಾತ್ಮಕ, ಸರ್ವಚೈತನ್ಯ,
ಜೇಯ, ಶುದ್ಧಾದ್ವಯ, ನಿರಂಜನ, ನಿರಾವರಣ,
ಜೇಯ, ನಿನ್ನೊಳಗೀ ಸಮಸ್ತ ಮಧ್ಯಸ್ತವಾಗಿದೆ
ನೀನೆ ಸತ್ಯರೂಪ,
ಜೇಯ, ನಾರಾಯಣಾ, ಮುಕುಂದ, ಮಾಧವ, ಕೃಷ್ಣ,
ಜೇಯ, ಚಕ್ರಿಯ ಪೀತವಾಸ ಲಕ್ಷ್ಮೀಲೋಲ
ಜೇಯ, ಸರ್ವಸ್ವತಂತ್ರನೆ ಭಕ್ತವತ್ಸಲನೆ ಬಿಡಿಸೆನ್ನ
ನೋವಿನಿಂದ!
ಗೋವಿಂದ ನೀನಲ್ಲದಿನ್ನಾರು ಗತಿಯೆನಗೆ,
ಮತಿಯಾರು, ದಿಸೆಯಾರು! ಕಾಪಾಡು! ಕಾಪಾಡು!

(ಮರವಟ್ಟು ಮಲಗುವನು)

[ಕುಳಿಂದಕನು ಬರುವನು. ಸುತ್ತಲೂ ನೋಡಿ ಕಿವಿಗೊಟ್ಟು ಕೇಳುವನು]

ಕುಳಿಂದಕ :—

ಏನು ಸದ್ದದು ನಾನು ಕೇಳಿದುದು ! ನೋವಿನಲಿ
ಮೊರೆಯಿಟ್ಟು ಕರೆಯುವಂತಿತ್ತು ! ಮುದ್ದಿನಾ ಸದ್ದು
ಮೃದುಮಧುರವಾಗಿತ್ತು ! ಕಾಡುಪಾಲಾದ
ಕೋಮಲೆಯು ಕೂಗಿನಂತಿತ್ತು! ಭ್ರಾಂತಿಯೋ? ನಿಜವೋ!

(ಸುತ್ತ ನೋಡಿ)

ಈ ವನದ ಸಂಭ್ರಮವೊ, ವೈಭವವೊ, ಬೆಡಗೊ,
ವೈಯಾರ ಬಿಂಕಗಳೊ, ನೋಡಿದರೆ ಹೊಸದಾಗಿ
ಪೊಂದೊಡಿಗೆಗಳ ಸುಟ್ಟ ಮದುಮಗಳ ತೆರದಿಂದೆ
ಶೋಭಿಪುದು ! ಏನತುಳ ಶಾಂತಿ! ರಿಸಿಗಳಿಹ
ಪುಣ್ಯಾಶ್ರಮಂಗಳಂ ಮಿರಿಹುದು. ಇಲ್ಲಾವ
ರಿಸಿಬಸದಿ ಇರುವುದನು ನಾನರಿಯೆನಲ್ಲಾ !
ತಳಿತ ಹಸುರಿನ ನಡುವೆ ಮೆರೆಯುತಿಹ ಕೆಂಪೆಲರು
ಹೋಮಾಗ್ನಿಯಿಂದುಗುವ ನಾಲಗೆಗಳಂತಿಹವು !
ದುಂಬಿಗಳ ಝೇಂಕೃತಿಯೊ ವೇದಘೋಷವ ಹೋಲು
ತಿಹುದು. ಕೋಗಿಲೆಯು ಇಡುಸರವೊ ಮಾನಸಿಜನ
ಕಹಳೆಯಂತಿಹುದು ! ಈ ತೆರದ ಗಾಂಭೀರ್ಯ
ಏಾವನಕ್ಕೇಕಾಯ್ತು ? ಋಷ್ಯಾಶ್ರಮಂಗಳಲಿ
ತೋರ್ಪಚ್ಚರಿಯ ನೋಟಗಳೆ ಎನಗೆ ತೋರುತಿದೆ !
ಕಾಡಾನೆಗಳ್ಕೇಸರಿಗಳ ಮರಿಗಳ್ಗೆ ಮೊಲೆ
ಯೂಡುವುವು. ಪಾವು ಮುಂಗುಲಿಗಳೊಡಗೂಡುವುವು
ಮುಷಕಂ ಮಾರ್ಜಾಲಮಂ, ಮೊಲಂ ತೋಳನಂ
ಕಾಡುವುವು, ಮೇವುಗಳ ಬೇಡುವುವು ! ಸಾತ್ವಿಕರ
ಸಾನ್ನಿಧ್ಯವಿಲ್ಲದಿರೆ ಜಾತಿ ವೈರಂಗಳಂ
ನೀಗುವವೆ ಮೃಗಗಣಂ ! ಪುಣ್ಯಾತ್ಮನಾವನೋ
ಬಳಿಯೊಳಿಹಂ ! ಆದೊಡಂ ಕಣ್ಣಾವ ಎಲೆವನೆಯು
ಮೈದೋರದಿಹುದು ! ತಾಪಸರ ಸುಳಿವಿಲ್ಲ !
ವಲ್ಕಲವನುಟ್ಟ ಮುನಿವಧುಗಳಂ ವಟುಗಳಂ
ಶ್ರುತಿಘೋಷ ಹೋಮಧೂಮಂಗಳಂ ನಾಕಾಣೆ !
ಈ ಸಾಭ್ರಮದ ಮಧ್ಯೆ ದುಃಖಸೂಚನೆ ಇದೇಂ ?
ನೆಳೆಗೊಂಬಿನಲ್ಲಡಗಿ ಬಿಕ್ಕಿಸುವ ಕೋಗಿಲೆಯು
ನುಣ್ಚರದಿ ರೋಧನದ ಮೆಲ್ಲುಲಿಯು ಸಂಗಮಿಸಿ
ಹರಿಯುತಿದೆ ! ಎಲೆಲೆ ಕೋಗಿಲೆ ಯಾವ ದುಃಖಾಗ್ನಿ
ನಿನ್ನೆದೆಯು ಒನವನಾವರಿಸಿಹುದು ! ತಳಿರಿಡಿದು
ಜೋಲುತಿಹ ಮರದ ಕೊಂಬೆಗಳಿಂದ ಬಸಿಯುತಿಹ
ಇಬ್ಬನಿಯು ನೋವಿಂದ ಬನದೇವಿ ಸೂಸುತಿಹ
ಕಂಬನಿಗಳಂತಿಹುದು ! ಎಲೆ ನೋಗೆ ನವಿಲೆ
ನಿನ್ನ ನೃತ್ಯದೊಳೇಕೆ ತಪ್ಪು ಹೆಜ್ಜೆಗಳಿಹವು ?
ಈ ಎಡೆಯೊಳೇನಿಂತು ಮಿಗವಕ್ಕಿಗಳ ಗುಂಪು ?
ಗಿಳಿಗಳೇಕಳುವಂತೆ ಹಾಡುವುವು. ಅರಸಂಚೆ,
ಯಾವೆಡೆಗೆ ಇಂತು ಜವದಿಂದ ಹಾರುತಿಹೆ
ಹರಿಣಗಳ ಗುಂಪೆಲ್ಲಿ ಗೋಡುತಿಹ ದಿಂತು ?
ದೇವನಾಜ್ಞೆಯ ಪೊತ್ತ ದೇವದೂತರ ತೆರದಿ !

(ಸ್ವಲ್ಪ ಮುಂದೆ ಹೋಗಿ ಚಂದ್ರಹಾಸನನ್ನು ನೋಡುವನು)

ಯಾವನೀ ಸುಕುಮಾರ ನಿಲ್ಲಿ ಮಲಗಿಹನು !
ನೆತ್ತರೇಂ ! ಕೊಂದಿತೀತನ ಯಾರ ಕಾರಲಗು ?
ನೋಡಿದರೆ ರಾಜಪುತ್ರನ ತೆರದಿ ತೇಜಸ್ವಿ
ಯಾಗಿಹನು. ಇವನ ಸಾನ್ನಿಧ್ಯದಿಂದಲೆ ಇಂತು
ಬನವೆಲ್ಲ ಶಾಂತಿಯಿಂ, ಶೋಕದಿಂ, ಬೆಡಗಿನಿಂ
ತುಂಬಿತುಳುಕುತಿದೆ. [ಚಂದ್ರಹಾಸನು ಎಚ್ಚತ್ತು]

ಚಂದ್ರ :— ಶ್ರೀ ಕೃಷ್ಣ, ಪರಮಾತ್ಮ !

ಕುಳಿಂದ :—ಬದುಕಿಹಂ! [ಹೋಗಿ ಮೈದಡವಿ ಮೊಲನೆತ್ತಿ]
ಬಾಲಕನೆ, ಇಲ್ಲೇಕೆ ಮಲಗಿರುವೆ ?
ಶೋಣಿತವಿದೇನು ? ಅಳಬೇಡ ! ಯಾರೊಡನೆ
ನೀನಿಲ್ಲಗೈತಂದೆ

ಚಂದ್ರ :—ಕಾರೊಡಲ ಚಂಡಾಲರೆಳೆತಂದು
ಕೊಲ್ವ ಯತ್ನವಮಾಡಿ ಕಜ್ಜ ಕೈ ಗೂಡದಿರೆ
ಕಾಲ್ಬೆರಳ ಕೊಯ್ದುಕೊಂಡೋಡಿದರು ! ನೋವು!

ಕುಳಿಂದಕ :—ಹೆದರದಿರು ಬಾಲಕನೆ! (ಸಗ್ಗಳೆಯ ನೀರಿಂದ
ಕಾಲ್ಬುದಿಯ ತೊಳೆಯುವನು) ನೀನಾರವಂ ಕಂದ ?

ಚಂದ್ರ :—ಶ್ರೀಹರಿಯ ಬಾಲಕಂ !

ಕುಳಿಂದಕ :— ನಿನ್ನ ಪಿತನಾರು ?

ಚಂದ್ರ :—ಶ್ರೀಹರಿಯೆ ತಂದೆ.

ಕುಳಿಂದಕ :— ನೀನಾವ ಊರವಂ ?

ಚಂದ್ರ :—ಶ್ರೀಹರಿಯೆ ನನ್ನೂರು !

ಕುಳಿಂದಕ :—(ಸ್ವಗತ) ಎನ್ನ ಪುಣ್ಯದ್ರುಮಂ ಫಲಿಸಿತೇ
ಇಂದು !
ಮೇಧಾವಿನಿಯ ಬಂಜೆತನ ಯಿಂದು ಪೋದುದೇ !
ಕತ್ತಲೆಯ ಮನಗಿಂದು ಮಣಿದೀಪವಾದುದೇ !
ಬತ್ತಿದ ಸರೋವರಕೆ ನವಜಲವೊದವಿತೇ !
ಸಂತಾನಯಿಲ್ಲದ ಕುಳಿಂದಕನ ಬಾಳ್ಕೆ
ಗುತ್ತಮ ಕುಮಾರನಾದನೇ ! ಕೃಷ್ಣ ! ಕೃಷ್ಣ !
ಮೃಗಯಾವ್ಯಸನದಿಂದೆ ಕಾನನಕೆ ತಾಂ ಕೃಷ್ಣ
ಮೃಗದ ಕೊಡೈದಿದೊಡೆ ದೊರೆಕೊಂಡನೀ ಕೃಷ್ಣ

ಮೃಗಭಾವದರ್ಭಕಂ ಪಾಪ ಕಳಸಿದೊಡಾಯ್ತು ಪುಣ್ಯಂ.
ಪರಮಾತ್ಮ ನಿನ್ನ ಲೀಲೆಯನರಿವರಾರು ?
ಮಗು, ನನ್ನ ರಾಜಧಾನಿಗೆ ಹೋಗಿ, ಬೇಕಾದು
ದೆಲ್ಲವನು ನಿನಗಿತ್ತು ಪೊರೆಯುವೆನು ಶ್ರೀಹರಿಯ
ಕೃಪೆಯಿಂದ. (ತನ್ನ ತುತೂರಿಯನ್ನೂದುವನು)

[ಪುಳಿಂದರ ಗುಂಪು ಓಡಿಬರುವುದು]

೧ ನೇ ಪುಳಿಂದ :—ಎತ್ತಣಿಂದಾಲಿಸಿದೆ ನಾದವಂ ?

೨ ನೇ :— ಇತ್ತಣಿಂ !

೩ ನೇ :—ನಮ್ಮ ದೊರೆ ಯಾವಳಲಗೀಡಾದನೋ ಏನೋ ?

ಕುಳಿಂದಕ :— ಬೇಡರಿರಾ !

೪ ನೇ :— ಇಲ್ಲಿಹಂ ! ಇಲ್ಲಿಹಂ !

೨ ನೇ :—(ಕುಳಿಂದಕರಿಗೆ) ನಿಮ್ಮನೇ ಅರಸುತ್ತ ಅಲೆದಲೆದ ದಣಿದೆವು.

೩ ನೇ :—ಯಾರೀ ಬಾಲಕಂ ? ಎಲ್ಲಿ ದೊರೆತಂ ?

ಕುಳಿಂದಕ :—ಬೇಡರಿರ, ಈ ಎಡೆಯೆ ದೊರಕಿದಂ ಬಾಲಕಂ
ತನ್ನ ತಾಯ್ತಂದೆಗಳ ನೆನೆಯದೆ ಮುರಾರಿಯಂ
ನೆನೆವನದರಾದಿವನಿಗೊಡೆಯ ನಚ್ಯುತನಾದ
ಕಾರಣಂ ಮೃತನಾಗದಡವಿಯೊಳ್ಜೀವಿಸಿದಂ !
ಎಲ್ಲರ್ಗೆತನುಜರಂ ಕುಡುವವಂ ಕೃಷ್ಣ ನೈಸಲೆ
ಮಕ್ಕಳಿಲ್ಲದ ನನಗೆ ಈತನೆ ಕುಮಾರಂ !
ನಿಮ್ಮಲ್ಲಿ ಕೆಲರು ಚಂದನಾವತಿಗೆ ಮುಂದೋಡಿ
ಮಂಗಳದ ಸುದ್ದಿಯಿಂ ಪುರಕೆಲ್ಲ ಸಾರಿ !
ಮೇಧಾವಿನಿಗೆ ತಿಳಿಸಿ ! ದೊರೆಗೆ ಪುತ್ರೋತ್ಸವಂ !
ಅದರಿಂದ ಪಟ್ಟಣವ ಸಿಂಗರಿಸಿ ಸಂತಸದ
ಕಡಲಲ್ಲಿ ಪ್ರಜೆಗಳೆಲ್ಲರು ಮುಳುಗಿ ತೇಲಲಿ !

[ಇಬ್ಬರು ಪುಳಿಂದರು ಹೋಗುವರು]

ಇಂದು ಸಿಕ್ಕಿದ ಮೃಗಗಳೆಲ್ಲವಂ ನೀವೆ
ಕೊಂಡುಂಡು ಹಬ್ಬವಂ ಮಾಡಿ. ಬೇಡರಿರ,
ಚಂಡಾಲರೀತರಳ ನಡಿವೆರಳ ಕೊಯ್ದಿಹರು.
ನೋವ ಸೈರಿಸಲಾರದಳುತಿಹಂ. ಮದ್ದ
ನಿಮಗಾರಿಗಾದೊಡಂ ತಿಳಿದಿರ್ದೊಡದನು
ತನ್ನಿ

ಒಬ್ಬ ಪುಳಿಂದ :—ನಾಬಲ್ಲೆ. ಈಗಲೇ ತರುವೆಂ. (ಓಡುವಂ)

ಕುಳಿಂದಕ :—(ಒಬ್ಬ ಪುಳಿಂದನನ್ನು ಕುರಿತು) ನೀವಿವನ ಹೆಗಳಮೇಲೇರಿಸಿಕೊ !

[ಪುಳಿಂದನೊಬ್ಬನು ಹೆಗಲಮೇಲೇರಿಸಿಕೊಳ್ಳುವನು]
(ಸರದೆ ಬೀಳುವುದು)

## ದೃಶ್ಯ ೮

[ಚಂದ್ರನಾವತಿಯ ರಾಜಬೀದಿ. ಭೂಸುರರಿಬ್ಬರು ದಾನ ದಕ್ಷಿಣೆಗಳಂ ಪೊತ್ತು ಬರುವರು]

೧ನೇ ಭೂಸುರ :—
ಈ ಪರಿಯ ದಾನಧರ್ಮಂಗಳಂ ಹಿಂದಾರು
ಮಾಡಿಲ್ಲ. ಮುಂದಾರು ಮಾಡುವರೊ ನಾನರಿಯೆ !

೨ನೇ :—
ಬೆಳ್ಗೊಡೆಯನೊಂದುಳಿದು ಮತ್ತೆಲ್ಲವಂ ಕೊಟ್ಟ
ರೆಂದೆನಗೆ ಹೇಳಿದರು. ಕೋಶವೇ ಬರಿದಾಗು
ವನ್ನೆಗಂ ಚೆಲ್ಲಿದರು ಎತ್ತಮುಂ ! ಬಡಜನರು
ಹೊರಲಾರದಲ್ಲಲ್ಲಿ ಚೆಲ್ಲುತ್ತ ಸೋದುದಂ
ನಾನೆ ಕಣ್ಣಾರ ಕಂಡಿಹಂ ! ನನ್ನಾಣೆ !

೧ನೆ :—ಈ ರಾಜ್ಯದಲ್ಲಿನ್ನು ಬಡಜನರ ಸುಳಿವಿರದೆ
ಹೋಗುವುದು. ಕುಂಟರಿಗೆ ಕಾಲ್ಬಂದಿದಂತೆ !
ಕುರುಡರಿಗೆ ಕಣ್ಬಂದಿದಂತೆ ಮೂಕರಿಗೆ
ಬಾಯ್ಬಂದು ಗಳಪಲೇಸಿದರಂತೆ. ವೈದ್ಯರಲ್ಲಿ
ಮದ್ದಿನಿಂ, ಮಂತ್ರದಿಂ, ಗುಣವಡೆಯದಿಸರುಜೆಗ
ಳಿನೆತೋ ಗುಣವಾದುವಂತೆ. ದೇಶವೇ
ಜಗ್ಗತಿದೆ ಬಂದವನು ಪುಣ್ಯಾತ್ಮನೆಂದು !

೨ನೆ :—ಹರಿಭಕ್ತರಿದ್ದೆಡೆಯೊಳೇನಾಗದಿಹುದು ?

[ಎದುರಾಗಿ ಮತ್ತೊಬ್ಬ ಭೂಸುರನು ಬರುವನು]

೩ನೇ :—ಪಂಡಿತರೆ ಎಲ್ಲಿಂದ ?

೨ನೆ —ಏನು ಶಾಸ್ತ್ರಿಗಳೇ ಹೀಗೆನ್ನುವಿರಿ ? ನೀವು ರಾಜ್ಯದಲ್ಲಿರಲಿಲ್ಲವೇನು ? ದೊರೆಗಿಂದು ದಿವ್ಯ ಪುತ್ರೋತ್ಸವಂ !

೩ನೆ :— ಮೇಧಾವಿನಿಯು ಮಗನ ಹೆತ್ತಿಹಳೆ ?

೧ನೆ :— ಇನ್ನೇನು ! ಹೆತ್ತಂತೆ ! ನಮ್ಮ ದೊರೆ
ಬೇಂಟೆಯ ಬಿನದಕೆಳಸಿ ಕಾನನಕೆ ಹೋದಾಗ
ಮುರಹರನನಲ್ಲದಿನ್ನಾರನೆನೆಯದ ಮುದ್ದು
ಮಗನೊಬ್ಬ ದೊರಕಿದನು. ನಾಮಕರಣಂ ಗೈಯ
ಲೆಂದಾವು ಹೋಗಿದ್ದೆವವರ ಮನೆಗೆ !

೩ನೆ :— ಹೆಸರೇನು ?

೨ನೆ :— ಚಂದ್ರಹಾಸ !

೩ನೆ :— ಬಲು ಸೊಗಸು! ವಿಧಹಾಸನೆಂದೇಕೆ ?

೨ನೆ :—ಒರಿಯ ಅಂಕಿತನಾಮವೆಂದರಿಯದಿರಿ ನೀವು.

೧ನೆ :—ಪಾಂಡಿತ್ಯ ವಾರಿಧಿಯ ಮಥನದಿಂದುದ್ಭವಿಸಿ ಬಂದ ನವನೀತವದು !

೩ನೆ :— ಅನ್ವರ್ಥನಾಮವೆಂತು ?
೧ನೆ :—ನಿರ್ಮಲ ಮುಖಾಂಬುಜದೊಳಿಂದುವಂ ಕಳಕಳಿಸಿ
ನಗುವನದರಿಂ ಚಂದ್ರಹಾಸನಾದಂ !
೨ನೆ :—ಪಸುಳೆತನದಿಂದೆ ವೃದ್ಧಾಪ್ಯದನ್ನೆಗಂ
ಬಿಸಜನಾಭನ ಭಕ್ತಿ ದೊರೆಕೊಳದ ಮನುಜರಂ
ನಸುನಗುವ ಧವಳದೊಳ್ ಚಂದ್ರಹಾಸಂ !
೧ನೆ :—ಪಸರಿಸುವ ಜಸದ ಬೆಳ್ಪಿಂ ಚಂದ್ರಹಾಸಂ !
೨ನೆ :—ಅಸಮನಕ್ಷೀಣನ ಕಳಂಕನತಿ ಶಾಂತನೆಂ
ಬೆಸೆವ ಸದ್ಗುಣ ದೇಳ್ಗೆಯಿಂ ಚಂದ್ರಹಾಸಂ !
೧ನೆ :—ಮಂಜುಮಹಿಮಾಸ್ಪದಂ ಚಾರುವೃತ್ತಂ ಕಲಾ
ಪುಂಜಂ ಸದಾನಭೋಗಂ ಕುವಲಯಪ್ರಿಯಂ
ರಂಜಿಸುವ ರಾಜನೆನ್ನವೊಲಾದೊಡಂ ಮಿತ್ರ ತೇಜಕಳ
ವಳಿದುಪಗೆಯ
ಭಂಜನೆಗೆ ಸಿಕ್ಕಿ ಬಡತನವಟ್ಟಿ ಕಂದಿ ಪಳಿ
ವಂ ಜಗವರಿಯೆ ಪೊತ್ತನೆಂದು ಬಿಡದ ಮೃತಾರ್ಚಿ
ಯಿಂ ಜರೆದು ನಗುವನದರಿಂ ಚಂದ್ರಹಾಸನಿವಂ !
೩ನೇ :—ಪಂಡಿತರ ನವನೀತವುಂ ಸವಿದು ಸಾಕಾಯ್ತು !
ನೋಡಲ್ಲ ಪುರವಾಸಿಗಳ ಗುಂಪು
ಗುಂಪಾಗಿ ಬರುತಿಹರು. ಬನ್ನಿ ಹೋಗೋಣ !
(ತೆರಳುವರು. ನಾಲ್ಕು ಜನ ಬರುವರು)
ಮೊದಲನೆಯವನು :—ಪುಣ್ಯಾತ್ಮನಪ್ಪಾ ಬಹುಕಾಲ ಬಾಳಲಿ
ಎಂದು ಕಾಣದ ಬೆಳಕ ಇಂದು ನಾಕಂಡೆ !
ಕಣ್ಮೊಟ್ಟೆಹಾಗಾಯ್ತು ಕಣ್ಣಿಲ್ಲದೀಪಾಪಿಗೆ !
ಎರಡನೆ :—ಹನ್ನೆರಡು ವರ್ಷಗಳಿಂದ ನರಳಿದೆನಪ್ಪಾ
ರೋಗದಿಂದ ! ವೈದ್ಯರಾಯ್ತು, ಮದ್ದಾಯ್ತು, ಮಂತ್ರ
ವಾಯ್ತು ತೀರ್ಥಯಾತ್ರೆಗಳಾದುವು ಏನಾದರೂ ವಾಸಿ
ಯಾಗಲಿಲ್ಲ. ಇನ್ನೇನು ಸೇಡೊಂದೆ ಉಳಿದಿತ್ತು.
ಅವನು, ಮಾರಾಯ, ನಮ್ಮೂರಿಗೆ ಕಾಲಿಟ್ಟದಿನವೇ
ಎಲ್ಲಾ ಗುಣವಾಯ್ತು ! ಸಾವಿರ ವರ್ಷಗಳು
ಬಾಳಲಿ ! ಎಂದೆಂದು ನಮ್ಮಾಳಿಯ ನಾಳಲೀ
ಮೂರನೆ.—ನನಗೆ ಕಾಲಿರದೆ ಬೀದಿಗಳಲಿ ಹೊರಳುತ್ತಿದ್ದೆ.
ಇನ್ನೇನು ಬೆಟ್ಟಗಳನ್ನು ಬೇಕಾದರೂ ಹಾರುವೆನು.
ನಮ್ಮೊಡೆಯನ ಸೈನ್ಯಕ್ಕೆ ಸೇರಿ ಅವನ ಸೇವೆಯಲ್ಲಿ
ಯೇ ಬಾಳನ್ನೆಲ್ಲಾ ತೇಯುವೆನು !
ನಾಲ್ಕನೆ :—ಹುಟ್ಟಿದಂದಿನಿಂದ ಮೂಕನಾಗಿದ್ದೆ. ನಾನಿನ್ನು
ಸಂಗೀತವನ್ನು ಕಲಿತು ಆಸ್ಥಾನದಲ್ಲಿ ಸಂಗೀತ
ವಿದ್ವಾಂಸನಾಗುವೆನು. ಬನ್ನಿ ನಮ್ಮ ನಾಡಿನ
ಏಳ್ಗೆಗೆ ನಾವೆಲ್ಲ ಮನಸಿಟ್ಟು ಕೆಲಸ ಮಾಡೋಣ !

[ಅವರು ತೆರಳುವರು. ಮತ್ತೆ ಇಬ್ಬರು ಬರುವರು]
ಒಂದನೆ :—ನಿಜವಾಗಿಯೂ ಕದ್ದವನು ನಾನಲ್ಲವಪ್ಪಾ
ಸುಮ್ಮನೇ ಸೆರೆಮನೆಯಲ್ಲಿಟ್ಟಿದ್ದರೆನ್ನ ಇಂದೆಲ್ಲರನು
ಬಿಡುಗಡೆ ಮಾಡಿದರು.
ಎರಡನೆ :—ಬ್ರಹ್ಮಹತ್ಯೆ ಗೋಹತ್ಯೆಗಳನ್ನು ಮಾಡಿದವರನ್ನೂ
ಕೂಡ ?
ಒಂದನೆ :—ಇದೇನು ಹೀಗೆಂದು ಕೇಳುವೆಯಲ್ಲಾ ? ಇನ್ನು
ಮುಂದೆ ನಾಡಿನ ಸೆರೆಮನೆಗಳನ್ನೆಲ್ಲಾ ಮುಚ್ಚುವರಂತೆ !
ತನಗೆ ತಾನೆ ಕಳ್ಳತನ ಹೋಗುವುದಂತೆ ! ಪುಣ್ಯಾ
ತ್ಮನೀನಾಡಿಗೆ ಕಾಲಿಡಲು ಹುಲಿ ಮೊದಲಾದ
ಕ್ರೂರ ಜಂತುಗಳು ಕೂಡ ಸಾಧುವಾದುವಂತೆ ! ಹೀಗಿ
ರಲು ಕಳ್ಳರು ಕೊಲೆಪಾತಕರು ಮುಂದಿರುವರೆ ?
ಎರಡನೆ :—ಭಾವ, ಬಾ. ಗುಡಿಗೆ ಹೋಗಿ ಶ್ರೀ ಹರಿಗೆ
ಹಣ್ಣು ಹೂಗಳನ್ನರ್ಪಿಸಿ ಮನೆಗೆ ಹೋಗೋಣ.
ಅಕ್ಕನು ನಿನಗಾಗಿ ಕೊರಗಿಸಾಯುತ್ತಿರುವಳು. ಅವ
ಳಿಗೆ ಜೀವ ಬಂದಂತಾಗುವುದು.

[ತೆರಳುವರು. ಏಳೆಂಟು ಜನ ಪಟ್ಟಣಿಗರು ಬರುವರು]
೧ನೆ :—ಚಂದ್ರಹಾಸನಿಗೆ ಜಯವಾಗಲಿ !
ಎಲ್ಲ :—ಚಂದ್ರಹಾಸನಿಗೆ ಜಯವಾಗಲಿ !
೨ನೆ :—ನಮ್ಮೊಡೆಯನಿಗೆ ಸೊಗಮಕ್ಕೆ !
ಎಲ್ಲ :—ನಮ್ಮೊಡೆಯನಿಗೆ ಸೊಗಮಕ್ಕೆ !
೩ನೆ :—ಶ್ರೀಹರಿಯ ಕೃಪೆಯಕ್ಕೆ ! ಶುಭಮಕ್ಕೆ !
ಎಲ್ಲ :—ಶ್ರೀಹರಿಯ ಕೃಪೆಯಕ್ಕೆ ! ಶುಭಮಕ್ಕೆ !
(ತೆರಳುವರು)

(ಪರದೆ ಬೀಳುವುದು)

## ಮಧ್ಯರಂಗಂ

### ದೃಶ್ಯ ೧.

[ಶಿಬಿರದ ಬಳಿಯ ಬಯಲಲ್ಲಿ ವೀರಸೇನ, ರಣಸಿಂಹ ತಿರುಗಾಡುತ್ತಿರುವರು]
ರಣಸಿಂಹ :—ಕಾಳೆಗದ ಬಳಲಿಕೆಯ ಪರಿಹರಿಸಲೆಂಬಂತೆ
ತಂಗಾಳಿ ಬೀಸುತಿದೆ.
ವೀರಸೇನ :— ಶಾಂತಿಯ ಸಂಜೆ !
ಗಗನಮಣಿ ಪಶ್ಚಿಮಾಂಗನೆಯ ಬೈತಲೆಯ
ರಂಗುಮಾಣಿಕದಂತೆ ಪಡುವೆಟ್ಟದೆಡೆಯಲ್ಲಿ
ಕಂಗೊಳಿಸುತಿಹುದೆಂತು. ಸಂಜೆವೆಣ್ಣುಟ್ಟ ರ
ಕ್ತಾಂಬರವೊ ಎಂಬಂತೆ ಬೈಗು ಗೆಂಪೆಸೆಯುತಿದೆ !
ಬೆಚ್ಚುವೆಣೆವಕ್ಕಿಗಳ ಹೃದಯಮಂ ಬೇಯಿಸುವ

ರಣಸಿಂಹ:— ಬಹಳ ಜನ ಮಡಿವಿಲ್ಲ!
ಇಂದಾದ ಕಾಳಗವು ಸಮಗ್ರಿಯ ಸಮರ!
ಆದರೂ ಶತ್ರುಗಳ ಪಕ್ಷದಲಿ ಬಹಳ ಜನ
ಯಮಪುರಿಯ ಸೇರಿದರು! ಮುಖ್ಯ ದಳಪತಿಯ
ಕಾರ್ಯ ಕೌಶಲ್ಯಕ್ಕೆ ಎಣೆಯಿಲ್ಲ! ಜಯಲಕ್ಷ್ಮಿ
ನಮ್ಮ ಕಡೆ ಎಂಬುದಕೆ ಸಂದೇಹವಿಲ್ಲ!

ವೀರಸೇನ:—
ನಮ್ಮ ದಳಪತಿ ಚಂದ್ರಹಾಸನೀಗೆಲ್ಲಿಹನು ?

ರಣಸಿಂಹ:—
ತನ್ನ ಗುಡಾರದಲ್ಲಿಹನು. ನಾಳೆಯ ಸಮರ
ಸನ್ನಾಹವಂ ಚಿಂತಿಸುತಲಿಹನೆಂದು ತೋರುವುದು!
ಅವನ ವಿಾರಿಹ ಯೋಧ್ಧನಿಹನೆಂದು ನಾನಂದೆ!
ಬಾಣಬಿಡುವುದರಲ್ಲಿ ಅವನ ಮುಂದಾರಿಲ್ಲ!
ನಾನೆ ನೋಡಿಹೆನು! ಅವನ ಸರಳುಗಳೆಂತು
ಕಾರ್ಗಾಲ ಮಳೆಯಂತೆ ಅರಿಭಟರ ಮುಚ್ಚುವುವು!
ಅವನ ಕೂರಸಿಯೆಂತು ಮಿಂಚುವುದು! ಅವನೊಡನೆ
ಹನ್ನೆರಡು ವರ್ಷಗಳ ಕಳೆದಿಹೆನು! ಅವನೆಣೆಯ
ಭಕ್ತರಂ ಕಂಡಿಲ್ಲ: ಅವನೆಣೆಯ ವೀರರಂ
ನೋಡಿಲ್ಲ! ಕ್ಷಮೆಯಲ್ಲಿ ಕ್ಷಮೆಯನ್ನೇ ವಿಾರಿಹನು!
ಎನಿತು ದೊರೆಗಳ ಗೆದ್ದನಾದರೂ ಒಂದೆಡೆಯು
ಕ್ರೂರನಾಗಿರಲಿಲ್ಲ. ಮನ್ನಣೆಯವನ ಶೀಲ!

ವೀರಸೇನ:—
ಹೌದು! ಅವನ ನುಡಿ ಸುಭಟರೆದೆಗಾವೇಶ.
ಅವನಿರಲು ಸಾವೆಂಬುವಂಜಿಕೆಯೆ ಸೈನಿಕರಿ
ಗಿರದು. ನಾನೆ ನೋಡಿದೆ ಇಂದು. ಅರಿಭಟರ
ಮುತ್ತಿಗೆಯು ಬಲವಾಗಲೆಮ್ಮವರು ಹಿಂಜರಿಯ
ಲೆಳಸಿದರು. ಚಂದ್ರಹಾಸನ ಅಮೃತಮಯವಾದ
ವಾಣಿಯುತ್ತೇಜಕದ ನುಡಿಗಳಂ ಕೇಳುತಲೆ
ಘುಗ್ಗಿದರ್ಮಸಗಿದಂಬುಧಿಯಂತೆ, ಸಲೆ
ಘುಗ್ಗಿದರ್ಮುಗಿಲ ಮೊಗ್ಗರದಂತೆ, ಭೋಂಕರಿಸು
ತೊಗ್ಗಿದರ್ಕವಿದು ಜೇನ್ನೊಣದಂತೆ ಪೊಯ್ದಾಡಿ;
ನುಗ್ಗಿದರ್ಮುಂಗಾರ ಬಿರುಗಾಳಿಯಂತೆ! ನುಡಿಗೆ
ಹಿಗ್ಗಿದರ್ಪೆಚ್ಚಿ ವೀರಾವೇಶವಿಂದ!

ರಣಸಿಂಹ:—
ಗೆಲ್ವೆಣ್ಣನಾರಾಮವ ವನದನಿಯಲ್ಲಿಹುದು!
ಅವನ ಚಂಚಲಿಪ ಕೂರಸಿಯ ಮಿಂಚನಳ
ವಾಂಗಲ್ಯ! ಆತನೇ ಜಯರಮೆಯ ಜೀವ!

ವೀರಸೇನ:—
ಆವನ ಕಂಠದೊಳೊಂದು ಸಾಲಗ್ರಾಮದುಪಲಂ
ಪೊನ್ನಮನೆಮಾಡಿಕೊಂಡೆಸೆಯುತಿಹುದಂತೆ!
ಆತನ ವಿಚಿತ್ರಕಥೆಗದೆ ಮೂಲವಂತೆ!
ಆದರ ಮೈಮೆಯಿಂದವನಿಗೆಲ್ಲಿಯುಂ ಜಯವಂತೆ!
ಆದು ನಿಜವೆ ?

ರಣಸಿಂಹ:— ಹೌದು, ಆದರಾತನ ಗೆಲವು
ಬಿಟ್ಟಗಲ್ಕೊನೊಳಲ್ಲದವನ ಸಪ್ಪದೊಳಿಹುದು!

ವೀರಸೇನ:—
ಆದೋ! ಕಡಲಕಳ್ಳನು ಕುಡಿದು ಬೈತಿಟ್ಟ
ಬೆಳ್ಳಬಟ್ಟಲ ತೆರದಿ, ಕೌಮುದಿಯ ಕಾಂತಿಯಲಿ
ಬಾಂದಳವ ಬೆಳಗುತ್ತ, ಭೂತಳವ ಮುದ್ದಿಸುತ,
ಕತ್ತಲೆಂಬುವ ಹೆಣ್ಣು ತನ್ನಿನಿಯನೈತರಲು
ಲಜ್ಜೆಯಿಂದೋಡುತಿರಲೋಲೆಯಿಂದಿರುವ
ಬಜ್ಜರದ ಕಿಡಿಯಂತೆ ರಂಜಿಸಂ ಹಿಮಕರಂ!

ರಣಸಿಂಹ:—
ಸಮರಸನ್ನಾಹವನು ಮೂದಲಿಪನೆಂಬಂತೆ
ಶಾಂತಿಯನು ಬೀರುತ್ತ ಮೂಡುತಿಹನು!
ಎಳೆಯಲ್ಲ ತಿಂಗಳಿನ ತೆಕ್ಕೆಯಲಿ ಮೆರೆಯುತಿಹು
ದೆಂತು ?

ವೀರಸೇನ:— ಹೋಮಾಗ್ನಿ ಧೂಮವಂ ಭೇದಿಸುತ
ಮೇಲೇಳುವಿಷ್ಟದೇವತೆಯಂತೆ ಕತ್ತಲೆಯ
ನಟ್ಟೊತ್ತಿ ಮೂಡಿ ಮೆರೆಯುವನೆಂತು!

ರಣಸಿಂಹ:— ಬೆಳ್ದಿಂಗ
ಳಿಂತೆಸೆವ ನಿಶೆಯಲ್ಲಿ ಕದನ ಚಿಂತೆಯು ಮಹಾ
ಪಾಪವೆಂದೇ ನನ್ನ ಮತ! ಆದರೂ ನಮ್ಮ
ಕರ್ಮಮಯವಾದಿಳೆಯೊಳಾ ಚಿಂತೆ ಏಕೆ ?
(ಕಹಳೆ ಕೇಳುವುದು)
ಕೇಳು! ಕಹಳೆಯ ನಾದ! ಹೊತ್ತಾಯ್ತು ಬಾ
ಬೀಡಿಂಗೆ ತೆರಳೋಣ (ಹೋಗುವರು)
ಪರದೆ ಬೀಳುವುದು.

## ದೃಶ್ಯ ೨

(ಚಂದನಾವತಿಯ ಒಂದು ಬೀದಿ. ಕುಂತಳನಗರ ನಿವಾಸಿ
ಯೊಬ್ಬನು ಬರುವನು).

ಕುಂ. ನಿ:—
ಹಿಂದೆ ನಾನಿಲ್ಲಿಗೈತಂದಾಗ ಈ ನಾಡು

ಕಾಡಬೇಡಾಗಿತ್ತು ! ಇಂದು ಹೊರೊಂದು
ನೋಟ ! ಸಸ್ಯ ಸಮೃದ್ಧಿಯಂ, ಪುರಗಳಿಂ,
ಉದ್ಯಾನವನಗಳಿಂ, ಸಿರಿಯು ನೆಲೆವೀಡಂತೆ
ತೋರುತಿಡೆ ! ಈ ನಾಡ ಜನರೆಷ್ಟು ಪುಣ್ಯಾತ್ಮರು !
ಈ ಚಂದನಾವತಿಯೊ ಸೊಬಗಿನಾಲಯದಂತೆ
ಮೆರೆಯುತಿದೆ ! ಮುಗಿಲಮುಟ್ಟುವ ಸೌಧ ಶಿಖರಂಗಳಿಂ,
ಮಣಿಶಿಲಾಸೋಪಾನದಿಂಬೆಸೆವ ಕೊಳಗಳಿಂ,
ಮೊರೆಮೊರೆದು ಪರಿವ ಪೆರ್ದೊರೆಗಳಿಂ, ತಿಳಿನೀರು
ತುಂಬಿತುಳುಕುವ ಚಿತ್ತರದ ಸರೋವರಗಳಿಂ,
ಕೆರೆಗಳಿಂ, ಮಣಿಕೃತಕ ಶೈಲದಿಂ, ಕೋಟೆ ಕೊ
ತ್ತಳಗಳಿಂ, ಶಿಲ್ಪಕಲೆಯಿಂದೆಸೆದ ಗುಡಿಗಳಿಂ,
ತರುಣಾರುಣ ಪ್ರಭಾಲಕ್ಷ್ಮಿಯುಂ ನಗುವಂತೆ,
ಪಲ್ಲವಿತ ಪಸುರಿನಿಂ, ಪೂತ ಕಡುಗೆಂಪಿನಿಂ
ದೆಸೆಯುತಿಹ ನನೆಮುಗುಳ ಹೂವುಗಳ ಪೆಂಪಿನಿಂ
ರಾಜಿಸುವ, ಮೋಹಿಸುವ ರಾಜೋಪವನಗಳಿಂ
ತೊಳಗುತಿದೆ ನಗರವಧು, ಸಿರಿಯಂತೆ ಸೌಭಾಗ್ಯ
ಕೆಡೆಯಾಗಿ, ಮೇಣ್ ವಿಜಯಶ್ರೀಯಂತೆ ವೀರರಾ
ಗರವಾಗಿ, ಚಂದ್ರನಂತಹ್ಲಾದಕರವಾಗಿ,
ಮದನಸತಿಯಂತೆ ಮನೋಹರವಾಗಿ, ಸರಸತಿಯ
ತೆರದಿಂದೆ ಬಿಜ್ಜೆಯೂರಾಗಿ, ಸಗ್ಗದೊಲು
ಪುಣ್ಯದಾವಾಸವಾಗೆಸೆಯುತಿಹುದು !
ಎಲ್ಲಿ ಕಿವಿಗೊಟ್ಟೊಡಂ ಸಾಮ ರವದಿಂಚರಂ !
ಹಾಡುತಿಹ ಲಲನೆಯರ ಮೆಲ್ಲುಲಿಗಳಿಂಪು !
ಎಲ್ಲಿ ಕಣ್ಣಿಟ್ಟೊಡಂ ಪೈರು ಪಚ್ಚೆಯ ಸೊಬಗು !
ಈ ನಾಡೊಳೊಂದು ಮರಿದುಂಬಿಯಾಗುದುಸಿಬರ
ಲದೆ ಪುಣ್ಯ ! ನಮ್ಮ ಕುಂತಳನಗರಿಗಿದು ಸಗ್ಗ !

[ಇಬ್ಬರು ಪುರಜನರು ಬರುವರು. ಕುಂ.ನಿ.ಯನ್ನು ನೋಡಿ]

೧ನೆ:—
ಯಾವನೋ ಹೊಸಬನಾಗಿರುವಂತೆ ತೋರುತಿದೆ !

೨ನೆ:—
ಸೋದರನೇ, ನೀನಾವ ದೇಶದವನು ?

ಕುಂ. ನಿ:—
ಅಣ್ಣಾ, ನಾನು ಕುಂತಳನಗರದವನು !
ದೇಶಸಂಚಾರವಾಗಿಲ್ಲಿಗೈತಂದೆ
ನಿಮ್ಮ ನಾಡಿನ ಸಿರಿಯ, ನಿಮ್ಮ ನಗರದ ಸೊಬಗ
ಕಂಡು ಬೆರಗಾಗಿ ಹೋದೆ. ಹಿಂದೆ ಇಂತಿರಲಿಲ್ಲ.
ನಿಮ್ಮನಾಳುವ ಪುಣ್ಯಪುರುಷನಾರು ?

೧ನೆ:—
ಚಂದ್ರಹಾಸನ ಕೀರ್ತಿ ಮಹಿಮೆಗಳ ಕೇಳರಿಯೆಯಾ ?

ಕುಂ. ನಿ:—
ಆತನೇ ನಿಮ್ಮರಸನೆ ?

೨ನೆ:—
ಆತನು ನಮ್ಮರಸ ಕುಳಿಂದಕನ ದತ್ತುಮಗ !
ಆತನಿಂದಲೆ ನಮ್ಮ ನಾಡಸಿರಿಯಿಂತು
ಶೋಭಿಪುದು ! ರಾಜ್ಯವಂ ಬಿತ್ತರಿಸಿ, ಅರಿನೃಪರ
ಮುರಿದಿಕ್ಕಿ, ಧರ್ಮಸಂಸ್ಥಾಪನೆಯ ಮಾಡಿ
ನಾಡೊಳೆಲ್ಲಿಯು ಸೊಗದ ಬೀಜಗಳ ಬಿತ್ತಿಹನು !

೧ನೇ:—
ನಿಮ್ಮ ನಾಡೆಂತಿಹುದು ? ನಿಮ್ಮರಸನೆಂತಿಹನು ! ಮಳೆ
ಬೆಳೆಗಳೆಂತಿಹವು ?

ಕುಂ. ನಿ.— ನಮ್ಮ ನಾಡಿಯ ಕಥೆಯ
ಕೇಳಿದರೆ ನಿಮಗೆ ಬೇಸರವಾಗದಿರದು.
ನಮ್ಮರಸನೊಳ್ಳಿದಂ ! ಮಳೆಬೆಳೆಗಳೆಲ್ಲಾ
ಮುನ್ನಿನಂತೆಯ ಇಹವು. ರೋಗರುಜೆಗಳ ಬಾಧೆ
ಎಲ್ಲಿಯುಂ ತೋರಿಲ್ಲ.

೨ನೆಯ:— ಇನ್ನೇನು ಕೊರತೆ ?

೧ನೆಯ:— ಕಳ್ಳಕಾಕರ ಭಯವೆ ? ಮತ್ತೇನು ?

೨ನೆ:— ಹೌದು
ನಮ್ಮೊಡೆಯನಿಗೆ ದುಷ್ಟಬುದ್ಧಿ ಎಂಬುವ ಮಂತ್ರಿ !
ಮುದುಕನಾಗಿಹ ದೊರೆಯ ಮೂಲೆಗಿಟ್ಟು
ತಾನೆ ನಾಡಿನಾಳ್ವಿಕೆಯೆಲ್ಲವಂ ಕೈಕೊಂಡು
ಬಡರೈತರಂ ಸುಲಿದು, ತನಗಾಗದವರಂ
ಕೊಂದು, ಪ್ರೋತ್ಸಾಹವುಂ ಕಳ್ಳಕಾಕರಿಗಿತ್ತು
ರಾಜ್ಯದಾದಾಯಮುಂ ತನ್ನ ಬೊಕ್ಕಸಕಿಟ್ಟು
ಧೂರ್ತನಾಗಿಹನು. ಹೇಳಿ ಕೇಳುವರಿಲ್ಲ;
ತಾನೆತಾನಾಗಿಹನು ! ದಂಗೆಕಾರರು ಹುಟ್ಟಿ
ಅಲ್ಲಲ್ಲಿ ಪ್ರಬಲವಾಗುತ್ತಿಹರು. ನಾಯಕನೆ
ಇಲ್ಲದಿಹ ಸೈನ್ಯದಂತಾಗಿಹುದು ನಾಡೆಲ್ಲ !
ಏನು ಕೋಲಾಹಲವು ! ಜನರೆಲ್ಲ ಗುಂಪಾಗಿ
ಬರುತಿಹರು !

೧ನೆ:— ಚಂದ್ರಹಾಸನು ನೆರೆಯರಾಜ್ಯದ
ಮೇಲೆ ದಂಡೆತ್ತಿ ಹೋಗಿದ್ದ. ಜಯವಾಯ್ತು
ಎಂದು ತೋರುವುದು ! ಇರಲ್ಲಿ ತಿಳಿಯೋಣ !

(ಸೈನಿಕರ ಗುಂಪೊಂದು ಬರುವುದು. ಅವರಲ್ಲಿ ಒಬ್ಬನನ್ನು ಕರೆದು ಕೇಳುವನು)

ಸೈನಿಕ:— ಮತ್ತೇನು
ನಮಗೆ ಜಯ! ಚಂದ್ರಹಾಸನು ದಂಡಿನೊಡಗೂಡಿ ಹಿಂತಿರುಗಿ ಬಂದ!

೨ನೆ:— ಜಯದಮೇಲೆ ಜಯ!
ನಮ್ಮರಸಗೆಣೆಯಾರು?

ಸೈನಿಕ:— ನಾಳೆ ಮತ್ತೊಂದು
ಪಯಣ.

೧ನೆ:— ಎಲ್ಲಿಗೆ?

ಸೈನಿಕ:— ಕುಂತಳ ನಗರಕ್ಕೆ?

ಕುಂ. ನಿ.— ಏಕಾಗಿ?

ಸೈನಿಕ:— ರಾಯಂಗೆ
ವರ್ಷವರ್ಷಕೆ ನಾವು ಕುಡುವ ಸಿದ್ದಾಯಮಂ
ದುಷ್ಟಬುದ್ಧಿಗೆ ಸಲಿಸಲೆಂದು, ಹೋಗುವೆವು!

ಕು. ನಿ:—ಚಂದ್ರಹಾಸನು ಹೋಗುವನೊ ಏನು?

ಸೈನಿಕ:—ಇಲ್ಲ, ಸೈನಿಕರು! (ತೆರಳುವನು)

೧ನೆ:—ಸೋದರನೆ, ಬಾ, ನಮ್ಮಮನೆಗೆ ಹೋಗೋಣ. ನಮ್ಮ ಆತಿಥ್ಯವನ್ನು ಸ್ವೀಕರಿಸಿ ನಾವು ಧನ್ಯರಾಗುವಂತೆ ಮಾಡು!

೨ನೆ:—
ಇಲ್ಲಿ ಛತ್ರಗಳಿಲ್ಲ. ಜನರೆದೆಯೆ ಛತ್ರ! ನಮ್ಮ ನಾಡಿಗೆ ಬರುವರಾರೂ ಹಸಿವು ನೀರಡಿಕೆಗಳ ಬಾಧೆಯನ್ನರಿಯರು.

ಕು. ನಿ.—
ರಾಜನಂತೆ ಪ್ರಜೆಗಳಲ್ಲವೆ? (ಹೋಗುವರು)

ಪರದೆ ಬೀಳುವುದು.

## ಅಂತ್ಯರಂಗಂ

### ದೃಶ್ಯ ೧.

[ಕುಂತಳನಗರ. ದುಷ್ಟಬುದ್ಧಿಯು ತನ್ನ ಹಜಾರದಲ್ಲಿ ಕುಳಿತು ಏನೋ ಪತ್ರವನ್ನು ನೋಡುತ್ತಿರುವನು. ದಂಡನಾಯಕನೊಬ್ಬನು ಅವನೆದುರಿರುವ ಆಸನದಲ್ಲಿ ಕುಳಿತಿರುವನು. ಸೇವಕನೊಬ್ಬನು ದೂರದಲ್ಲಿ ಕೈಕಟ್ಟಿಕೊಂಡು ನಿಂತಿರುವನು.]

ದಂಡ:—
ಜೀಯ ಅವನ ಅಪರಾಧವೇನಿಲ್ಲ
ನಾನೇ ವಿಚಾರಿಸಿದೆ! ಗುಣವಂತ! ಬಲುದೊಡ್ಡ
ವಂಶಸ್ಥ! ಸಕಲ ಶಾಸ್ತ್ರಪಾರಂಗತನು!

ದುಷ್ಟ:—(ತಲೆಯೆತ್ತಿ, ದಂಡನಾಯಕನನ್ನು ದುರುದುರನೆ ದೃಷ್ಟಿಸಿ ನೋಡಿ)
ಇಲ್ಲ, ಅವನು ಸಾಯಲೆಬೇಕು! ನನ್ನಾಜ್ಞೆ!

[ಪುನಃ ತಲೆ ಬಗ್ಗಿಸಿ ಪತ್ರ ಓದುವನು. ದಂಡನಾಯಕನು ಚಿಂತಿಸಿ]

ದಂಡ:—
ಅಪರಾಧವಿಲ್ಲದೇ ಮರಣದಂಡನೆ ಏಕೆ?

ದುಷ್ಟ:—(ಸಿಡುಕಿನಿಂದ)
ನೀನಾರು ಕೇಳುವುದಕ್ಕೆ! ಹೇಳಿದುದ ಮಾಡು!

ದಂಡನಾ:—
ಅವನ ಕೊಂದರೆ ದಂಗೆಯಾಗಿಯೇ ಆಗುವುದು!

ದುಷ್ಟ:—
ಭಟರ ಕೂರಸಿಗಳಿಗೆ ಕಿಲುಬು ಹಿಡಿದಿಲ್ಲ.
ನರರ ರುಂಡಗಳೇನು ವಜ್ರವಲ್ಲ! (ಪುನಃ ಓದುವನು)

ದಂಡನಾ:—
ಹಿಂದವನು ನಿಮಗೆ ಮಿತ್ರನಾಗಿದ್ದ!

ದುಷ್ಟ:—ಈಗಲ್ಲವಷ್ಟೆ?

ದಂಡನಾ:—ಅನ್ಯಾಯ ಮಾಡಿದಂತಾಗುವುದು.

ದುಷ್ಟ:—ಏಕಿಂತು ನೀನೆನ್ನ ಪೀಡಿಸುವೆ, ಹೊರಡಾಚೆ!

(ದಂಡನಾಯಕನು ತಲೆ ಬಗ್ಗಿಸುವನು. ದುಷ್ಟಬುದ್ಧಿಯು ಪತ್ರದಕಡೆ ತಿರುಗುವನು)

(ಪುನಃ) ಏಕಿನ್ನು ಕುಳಿತಿರುವೆ, ಹೊರಡು, ನಡೆ; ಬೇಗ;
(ದಂಡನಾಯಕನು ಏಳುವನು) ಕತ್ತಲಾಗುವಮುಂಚೆ
ಅವನ ತಲೆ ಹಾರಬೇಕು.

(ದಂಡನಾಯಕನು ಹೋಗುವನು. ಮಂತ್ರಿಯು ತಲೆಯುಲ್ಲಿ ಸೇವಕನಿಗೆ ಸನ್ನೆ ಮಾಡುವನು.)

ಸೇವಕ:—ಜೀಯ, ಏನಪ್ಪಣೆ?

ದುಷ್ಟ:—ಚಂದನಾವತಿಯ ದೂತರನ್ನು ಒಳಗೆ ಬರಹೇಳು!
(ಸೇವಕನು ಹೋಗುವನು) ಏನಿದೆತ್ತಣ ಕೌತುಕದ ಸುದ್ದಿ
ಕುಳಿಂದಗೆ

ಸೂನು ಜನಿಸಿರ್ದಪನೆ ಬಂಜೆಯಾಗಿಹಳವನ
ಮಾನಿನಿಯು; ಅತಿ ವಿಚಿತ್ರಮಿದು; ಇರಲಿ
ಎಲ್ಲವನು ವಿಶದವಾಗರಿಯುವೆನು;

[ಇಬ್ಬರು ಚಂದನಾವತಿಯ ದೂತರು ಬರುವರು. ರುದ್ರಾಕ್ಷಿ, ತುಲಸಿ ಮೊದಲಾದ ಮಾಲೆಗಳನ್ನು ಧರಿಸಿರುವರು. ನಾಮಗಳನ್ನು ಹಾಕಿಕೊಂಡಿರುವರು. ಬಂದು ಕೈಮುಗಿವರು. ದುಷ್ಟಬುದ್ಧಿಯು ಆಸನಗಳನ್ನು ತೋರಿಸಲು ಕುಳಿತುಕೊಳ್ಳುವರು)

(ಸ್ವಗತ)— ಏನಿದೀವೇಷ ! ಅವಧೂತರಂತಿಹರು ! ಚಂದನಾವತಿಯೆಲ್ಲ ಸನ್ಯಾಸ ಸ್ವೀಕಾರ ಮಾಡಿರುವುದೋ ಏನೋ ! [ದೂತರನ್ನು ಕುರಿತು:— ದೂತರಿರ, ತಂದ ಕಪ್ಪಕಾಣಿಕೆಗಳನು ರಾಜ್ಯದ ಬೊಕ್ಕಸಕೆ ಸುರಿದಾಯ್ತೆ ?

೧ನೆ ದೂತ:— ರಾಣಿಗೆ ಪುರೋಹಿತಗೆ ಸಲ್ಲಿಸುವ ಹಣಹೊರತು ಇನ್ನುಳಿದುದೆಲ್ಲವಂ ಸಲ್ಲಿಸಿದೆವು !

ದುಷ್ಟ:— ರಾಣಿಗೆ ಪುರೋಹಿತಗೆ ಸಲ್ಲಿಸುವ–ಸಿದ್ಧಾಯವಂ ನಮಗೇ ಸಲ್ಲಿಸುವ ಕಟ್ಟಳೆಯ ಮಾಡಿಹೆವು ! ತಿಳಿಯಿತೇ ?

೨ನೆ ದೂತ:— ಅಪ್ಪಣೆ

ದುಷ್ಟ:—
ನಿಮ್ಮರಸುಗುವರಂಗೆ ಚಂದ್ರಹಾಸಂಗೆ
ಈಗೆನಿತು ವಯಸ್ಸು ?

೧ನೆ ದೂತ:— ಪದಿನೆಂಟು !

ದುಷ್ಟ:— ಕುಳಿಂದಂಗೆ ಮಕ್ಕಳಿರಲಿಲ್ಲವಲ್ಲ ?
ಈ ಸುದ್ದಿ ದಿಟವೆ ?

೨ನೆ:— ಜೀಯ ಪುಸಿಯಲ್ಲಮಂ
ಬೇಂಟೆಗೈದಾಗ ಕಾನನದ ಮಧ್ಯದೊಳ-
ನಾಥನಾಗಿಹ ಶಿಶು ನಿಧಾನಮಿರೆ ಕಂಡೆತ್ತಿ
ಕೊಂಡು ಬಂದಾತ್ಮಜ ವಿಧಾನದಿಂದೋವಿದಂ !

ದುಷ್ಟ:— (ವಿಸ್ಮಯದಿಂದ)
ಏನು ! ಕಾನನಾಂತರದೊಳವನು ದೊರಕಿದನೆ ?

೧ನೆ:— ಹೌದು !

ದುಷ್ಟ:— ನೀವಿಂದು ತಂದ ಸಿರಿಯೆಲ್ಲಮುಂ ಅರಿಗಳಂ
ಗೆಲ್ದವನು ತಂದುದೇ ?

೧ನೆ:— ಹೌದು ! ಜೀಯ !

ದುಷ್ಟ:— ಬಹು ಪರಾಕ್ರಮಿಯೆ ?

೨ನೆ:— ಜೀಯ ನಮ್ಮೆಳಿಗೆ
ಎಂದಾತ ನೃಪತಂದನೋ ಅಂದಿನಿಂದ
ನಮ್ಮ ರಾಜ್ಯದ ಶನಿಯು ತೊಲಗಿದನು. ಪೈರು
ಪೆರ್ಚಿದುದು. ಸೌಭಾಗ್ಯಮೆಲ್ಲಿಯುಂ ಮೈದೋರಿತು !
ಬರಗಾಲಮುಡಗಿದುದು ! ಕಾರ್ಮುಗಿಲ ಮೋಡಗಳು
ಕಾಲಕಾಲಕೆ ತಮ್ಮ ಕರ್ಮವಂ ಬಿಡದೆಸಗ
ತೊಡಗಿದುವು. ಒಂದು ನವಚೈತನ್ಯವಾವರಿಸಿ
ತಿರೆಯೆಲ್ಲ ಸಂತಸದಿ ಕಂಗೊಳಿಸುತಿಹುದು !
ರೋಗರುಜೆಗಳ ಬಾಧೆಯಿಲ್ಲ ! ಮೃತ್ಯುವಿನ
ಸುಳಿವಿಲ್ಲ ! ಕಳ್ಳಕಾಕರ ಭೀತಿಯಿಲ್ಲ

ದುಷ್ಟ:— ಸಾಕು, ಬಿಡು ! ಗೊತ್ತಾಯ್ತು !
(ಸೇವಕನಕಡೆ ತಿರುಗಿ)

ಕಿಂಕರಾ
ಇವರನ್ನು ಭೋಜನಕೆ ಕರೆದೊಯ್ಯು !

೧ನೆ:— ಜೀಯ
ಮನ್ನಿಸಿರಿ ! ಇಂದು ಏಕಾದಶಿಯು ! ಇಂದುಣಿಸ
ನೊಲ್ಲೆವು ! (ಮಂತ್ರಿಯು ದುರದುರನೆ ನೋಡುವನು)
ನಾವೆಲ್ಲ ವೈಷ್ಣವರು

ದುಷ್ಟ:— ಹಾಗಾದರೆ ತೆರಳಿ [ದೂತರು ಕೈಮುಗಿದು ಹೊರಡಲುದ್ಯುಕ್ತರಾಗುವರು ]
ನಿಮ್ಮರಸಗೀ ಪತ್ರವಂ ಕೊಟ್ಟು
ನನ್ನ ಕೃಪೆಯಂ ತಿಳುಹಿ ! [ಹೊರಡುವರು ದೂತರು]

ಏನಹಂಕಾರ !
ನಾನೀವ ಭೋಜನವನುಣಲೊಲ್ಲರಂತೆ !
ಸೇವಕರೆ ಇಷ್ಟು ಸೊಕ್ಕಿದಮೇಲೆ ಅರಸನೆಂ
ತಿರಬೇಕು ! (ಸ್ವಲ್ಪಹೊತ್ತು ಯೋಚಿಸಿ)
ಪಾಳಡವಿಯೊಳ್ಪಸುಳೆಯಂ ಕೊಂದು
ಬಹುದೆಂದು ಹೇಳಿದೊಡೆ ಚಂಡಾಲರಂದುಳಿಹಿ
ಬಂದರೇ ? ಈ ಚಂದ್ರಹಾಸನಾ ಬಾಲನಾ
ಗಿರಬಹುದೆ ? ಗಾಲವನು ಅಂದ ನುಡಿ ಸುಳ್ಳಲ್ಲ.
ಎಂತಾದರೂ ಅವನ ಸಂಹರಿಸದೊಡೆ ಸೊಗಮಿಲ್ಲ !
ನಾನೆ ಚಂಪಕಪುರಕೆ ಪೋಗಿ ನೋಡುವೆನು
ವಿಧುಹಾಸನಾರೆಂದು ! ನನ್ನಾಜ್ಞೆಯಂ ಮೀರಿ
ದತ್ತುಮಗನನ್ನೆಂತು ಪಡೆದಂ ಕುಳಿಂದಕಂ ?
ಸೇವಕನೆ ಹೋಗು, ಮದನನಂ ಬರಹೇಳು !
(ಸೇವಕನು ಹೋಗುವನು)
ಮದನನಿಗೆ ಮದುವೆಯಾಗುವ ಕಾಲ ಬಳಿಯಾಯ್ತು
ನವಯೌವನೆಯು ವಿಷಯೆ. ವರನಾಗಬೇಕಾಗಿದೆ !
ಇರಲಿ, ಮೊದಲೀ ಚಂದ್ರಹಾಸನಂ ಕೊಲ್ಲಿಸಿ
ತರುವಾಯ ಬೇರೆಯಾಲೋಚನೆಯ ಮಾಡುವೆನು.
[ಮದನನು ಬರುವನು]

ಮದನ :—ತಾತ, ಏಕೆನ್ನ ಬರಹೇಳಿದ್ದು ?

ದುಷ್ಟ :— ಕುಳಿತುಕೋ
ಹೇಳುವೆನು. (ಮದನನು ಕುಳಿತುಕೊಳ್ಳುವನು)

ಮದನ :— ನಿಮ್ಮ ಮೊಗದಲ್ಲೇನೊ ಚಿಂತೆ
ಯಾಡುತಿದೆ !

ದುಷ್ಟ :— ಏನಿಲ್ಲ ; ರಾಜಕಾರ್ಯಕ್ಕಾಗಿ
ಚಂದನಾವತಿಗೆ ನಾನೀಗಲೆ ಹೊರಡುವೆನು.
ನಾನಿಲ್ಲಿಗೈತರುವವರೆಗೆ ನೀನೆ
ರಾಜ್ಯದಾಡಳಿತವಂ ನೋಡಿಕೊಂಡಿರಬೇಕು !

ಮದನ :—ಅಪ್ಪಣೆ ! ರಾಜಕಾರ್ಯವದೇನು ?

ದುಷ್ಟ :— ಕುಳಿಂದಕನ
ರಾಜ್ಯಭಾರವಂ ನೋಡಿಕೊಂಡು ಬರುವೆ !

ಮದನ :—ಇಷ್ಟು ಅವಸರವೇಕೆ ?

ದುಷ್ಟ :— ಬಂದಮೇಲೆಲ್ಲವನು
ಹೇಳುವೆನು ! (ಹೊರಗೆ ನೋಡಿ) ಯಾರಲ್ಲಿ ?

ಮದನ :— ತಂಗಿ, ಬಂದಿಹಳು !

(ವಿಷಯೆ ಒಳಗೆ ಬರುವಳು : ಅಲಂಕಾರ ಭೂಷಿತೆಯಾಗಿ ಲಜ್ಜೆಯಿಂದ ಹೆಜ್ಜೆಯಿಡುತ್ತಾ)

ದುಷ್ಟ :—ಬಾ ತಾಯಿ, ಏನಿಷ್ಟು ಲಜ್ಜೆ ! ನಿನ್ನನಿಯ
ನಿಲ್ಲಿಲ್ಲ ! ಬಾ ಮುಂದೆ ! (ಮುಂದೆ ಬರುವಳು)
ಬಂದುದೇಕೆಂದೀಗ
ಗೊತ್ತಾಯ್ತು !

ವಿಷಯೆ :—
ತಾತ ನಂದನದೊಳಾಂ ನೀರ್ವೊಯ್ದು ಬೆಳೆಯಿಸಿದ
ಚೂತಲತೆ ಪೂತಿಹುದು. ಉದ್ಯಾಪನಂಗೈಸ
ಬೇಕದಕೆ !

ದುಷ್ಟ :—ಮದನ ಇವಳ ನೋಂಪಿಯುಂ ಮಾಡಿಸು !

ಮದನ :—ತಂಗಿ ಆ ಭಾರ ನನ್ನ ಮೇಲಿರಲಿ !

ವಿಷಯೆ :—
ಗೂಡಿನೊಳಗಿಹ ಹೆಣ್ಣುಗಿಳಿಗೊಂದು ಜೊತೆಯಿಲ್ಲ
ಅದಕೊಂದು ಜೊತೆಬೇಕು !

ದುಷ್ಟ :— ಇನ್ನೇನು ಬೇಕು !

ವಿಷಯೆ :— ತಾತ, ನಾ ಗಿಡಗಳಿಗೆ ನೀರೆರಚುತಿದ್ದೆ
ತುಂಬಿಗಳು ಬಂದೆನ್ನ ಮೊಗಮೆಲ್ಲವಂ ಮುತ್ತಿ
ಮುಂಗುರುಳ ಮೊಲೆಲ್ಲ ಸುಳಿಸುಳಿದು ಝೇಂಕರಿಸಿ
ಬಹಳ ಭಯಪಡಿಸಿದುವು. ಕೋಗಿಲೆಯು ಕೂಡ
ಬರಿದೆ ಬಗ್ಗಿಸುತೆನ್ನ ಮೂದಲಿಸುತಿಹುದು !

ದುಷ್ಟ :—
ಇರಲಮ್ಮಾ, ಆ ದುರುಳರಂ ಪಿಡಿದು ಸೆರೆಮನೆಗೆ
ಕಳುಹೋಣ.

ವಿಷಯೆ :— ತಾತ, ಎಲ್ಲಿಗೆ ಹೊರಡುವುದು ನೀನು !

ದುಷ್ಟ :—ಚಂದನಾವತಿಗಮ್ಮಾ ; ಕೇಳಿಬಲ್ಲೆಯ ನೀನು ?

ವಿಷಯೆ :—ಚಂದ್ರಹಾಸನಿಹ ಪಟ್ಟಣಕ್ಕೇನು ?

ದುಷ್ಟ :—(ಧ್ವನಿಯನ್ನು ಬದಲಾಯಿಸಿ) ಹೌದು ;
ನೀ ಹೊರಡು. ನಾನಿನ್ನು ಹೊರಡುವೆನು, ಹೊತ್ತಾಯ್ತು!
(ಹೊರಡುವನು)

ವಿಷಯೆ :—
ಅಣ್ಣಾ, ತಾತನತ್ತಿಗೆಯ ತರಲೆಂದು ಹೋಗುವನೆ ? /

ಮದನ :—
ಅಲ್ಲ, ಮೈದುನನ ತರಲೆಂದು ತೋರುತದೆ !

ವಿಷಯೆ :—
ಚಂದ್ರಹಾಸನ ನೀನು ನೋಡಿರುವೆ ಏನಣ್ಣಾ ?
ಅವನ ಕೀರ್ತಿಯು ಜಗದಮೇಲೆಲ್ಲ ಹರಡು
ತಿದೆಯಂತೆ ! ಹೌದೇನು ?

ಮದನ :— ಹೌದಾದರೇನಂತೆ,
ಅವನ ಕೈಹಿಡಿಯಲಾಸೆಯೆ ನಿನಗೆ ?

ವಿಷಯೆ :— ಬಿಡು, ಅಣ್ಣಾ !
ನಿನಗೇನು ಬರಿಯ ಹಾಸ್ಯ !

ಮದನ :— ಗೊತ್ತಾಯ್ತು !
ಅವನ ಕೀರ್ತಿಯಮೇಲೆ ನಿನಗೆ ಕಣ್ಣಿಲ್ಲ ;
ಅವನ ಸೊಬಗಿನಮೇಲೆ ! ನಾನರಿಯೆನೇ ನಿನ್ನ !
ನಿನಗಿಂತ ಮುಂದಾಗಿ ಬಂದವನು ನಾನು !

ವಿಷಯೆ :—ಅಮ್ಮ ಕೂಗುವಳೆನ್ನ, ಹೋಗುವೆನು.
(ಓಡುವಳು)

ಪರದೆ ಬೀಳುವುದು.

## ದೃಶ್ಯ ೨

[ಚಂದನಾವತಿಯ ಅರಮನೆಯ ಒಂದು ವೈಭವದ ಕೊಠಡಿ ದುಷ್ಟಬುದ್ಧಿಯು ಕುಳಿತಿರುವನು. ಸುತ್ತಲೂ ನೋಡಿ ಕೆಳದುಟಿಯಂ ಕಚ್ಚಿ]

ದುಷ್ಟ :—
ಏನಿದೀ ಸಂಪದಂ ! ಏನಿದೀ ವೈಭವಂ !
ಏನಿದೀ ಬಿಂಕಂ, ಬೆಡಂಗು ! ಚಕ್ರೇಶ

ರನುಭವಿಪ ಸಿರಿಯಿಲ್ಲಿ ಸೂರೆಗೊಂಡಿಹುದು !
ಪಳುಕುಗಳ ನೆಲಗಟ್ಟು ; ಮರಕತಂಗಳ ಜಗಲಿ ;
ಪೊಳೆವ ನೀಲದ ಭಿತ್ತಿ ! ಬಜ್ಜರದ ಕಂಧಮುರೆ
ತೊಳಪ ವೈಡೂರಿಯದ ಮದನಕ್ಕೈ ; ಮಿರುಪ
ಗೋಮೇಧಿಕದ ಬೋದಿಗೆಗಳಾಳಿ ತಳತಳಿಸು
ತಿಹ ಪುಷ್ಯರಾಗದ ತೊಲೆಗಳೆಸೆವ ಮಾಣಿಕಂ
ಗಳ ಲೋವೆ, ಮುತ್ತುಗಳ ಸೂಸಕಂ, ಮಿಸುಗುವ ಪ
ವಳದ ಪುತ್ಥಳಿ ಪೊನ್ನಪೊದಕೆ ! ಕಂಗಳಂ
ಕುರುಡುಮಾಡುವ ತೆರದಿ ತೊಳಗುತಿಹುದರಮನೆಯು !
ಈ ಪುರವೊ ಭೂತಳದ ವೈಕುಂಠದಂತಿಹುದು !
ಕಿರಿಯರಸಗೀತಕೀ ವೈಭವಂ ? ಇರಲಿ
ಇವನ ಬಿಂಕವ ಮುರಿವೆ !

[ಕುಳಿಂದಕನು ಚಂದ್ರಹಾಸನೊಡನೆ ಬರುವನು. ಇಬ್ಬರೂ ಮಂತ್ರಿಗೆ ಕೈಮುಗಿದು ಕುಳಿತುಕೊಳ್ಳುವರು.]

ಕುಳಿಂದಕ :—

ಮಂತ್ರಿವರ್ಯಗೆ ಸುಖಾಗಮನವಂ ಬಯಸುವೆಂ !

ಚಂದ್ರ :—ಹಿರಿಯರಿಗೆ ವಂದಿಪೆಂ !

ದುಷ್ಟ :— ನಿಮಗೆ ಮಂಗಳಂ !
ಈತನೇ ನಿನ್ನ ಸುಕುಮಾರನೋ ?

ಕುಳಿಂದಕ :— ಹೌದು !
ವಿಪಿನದೊಳ್ತನಗೀ ಕುಮಾರಕಂ ಮುಂಗೈದ
ತಪದ ಫಲದಿಂ ತಾನೆ ದೊರೆಕೊಂಡ ನೀತನಂ
ಕೃಪೆಯಿಂದೆ ನೀವೆ ಪಾಲಿಸವೇಳ್ಕುದು !

ದುಷ್ಟ :—(ಚಂದ್ರಹಾಸನನ್ನು ನೋಡಿ ತನ್ನೊಳಗೆ)
ಈತನಹುದಾ ಚಂದ್ರಹಾಸಂ !
ಚಂಡಾಲರೆನಗಿಂತು ವಂಚನೆಯ ಮಾಡಿದರೇ !
ಎನಗರಿಯದಂತೆನ್ನ ಕುತ್ತಿಗೆಯ ಕೊಯ್ದರೇ ?
ಇರಲಿ, ಎನ್ನೆದೆಯ ಭಾವಗಳ ಸೂಚಿಸಲು
ಇದು ಸಮಯವಲ್ಲ. (ಗಟ್ಟಿಯಾಗಿ) ಕುಳಿಂದಕ, ನಿನ್ನ
ಪುತ್ರನಂ ಕಂಡೊಡನೆ ಮೂಡಿದುತ್ಸವಮೆನಗೆ.
ನಿನ್ನ ತರುವಾಯ ಸಿಂಹಾಸನಕೆ ಈತನಂ
ಬಿಟ್ಟರಾರನ್ಯರಿಲ್ಲ !

ಕುಳಿಂದ :— ಬಂದ ಕಾರ್ಯವದೇನು ?

ದುಷ್ಟ :—(ತನ್ನೊಳಗೆ)
ಬಂಜೆಯಾಗದು ವಿಪ್ರನಂದೆನ್ನೊಳೆಂದ ನುಡಿ ;
ರಂಜಿಸುವ ರಾಜಲಕ್ಷಣದೊಳೊಪ್ಪುವನಿವಂ !
ಭಂಜಿಸದೊಡೀ ಧರಣಿಗೀತ ನರಸಾದಪಂ !
ಬಳಿಕ ಮಗ ಮದನಂಗೆ ದೊರೆತನಂ ದೊರಕದು !
ಬಲಶಾಲಿಯಾಗಿರುವ ನಗ್ಗಳಿಕೆಗಂಜದವ
ನಲ್ಲೀತಂ. ನಂಜನೂಡಿಸಿ ಕೊಲ್ಲುವಾಯಮಂ [ನಂಗೆ
ನೆಗಳ್ವೆಪೆಂ. (ಗಟ್ಟಿಯಾಗಿ) ಕುಳಿಂದಕ ನನ್ನ ಮಗ ಮದ
ಪತ್ರವೊಂದನು ಕಳುಹಬೇಕು. ಚಂದ್ರಹಾಸನ ಕಳುಹು.
ಆತನೂ ನಮ್ಮ ನಗರವ ನೋಡಿದಂತಪ್ಪುದು.
ಮದನ ಮೊದಲಾದವರ ಪರಿಚಯವು ದೊರಕುವುದು.

ಕುಳಿಂದಕ :—ತವಾಜ್ಞೆ.

ದುಷ್ಟ :—
ರಾಜಕುಮಾರನೇ, ನಿನ್ನಂತ ಯುವಕರಿಗೆ
ಪಯಣವೆಂದರೆ ಏನು ? ಬರಿಯಾಟವಲ್ಲವೇ ?

ಚಂದ್ರ :—
ಲೇಖನವ ಬರೆದುಕೊಡಿ ! ಶೀಘ್ರದಲ್ಲಿಯೆ ಹೋಗಿ
ಕಾರ್ಯವನು ಕುಂದೆಲ್ಲದಂತೆಸಪಿ ಬರುವೆ.

ಕುಳಿಂದಕ :—
ನೀನೊಬ್ಬನೇ ಹೋಗುವಿಯಾ, ಜೊತೆಗೆ ಸೇವಕರ
ಕರೆದುಕೋ ! ವೀರಸೇನ, ರಣಸಿಂಹರಿಹರಷ್ಟೆ ?

ದುಷ್ಟ :—ಯಾರವರು ?

ಕುಳಿಂದಕ :— ನಮ್ಮ ಸೈನ್ಯಾಧಿಕಾರಿಗಳು.
ಚಂದ್ರಹಾಸಂಗೆ ಆಜೀವ ಸ್ನೇಹಿತರು.

ದುಷ್ಟ :—ಹಾಗೆಯೇ ಮಾಡಲಿ !
ಒಂಟಿಯಾಗಿರೆ ದಾರಿ ದೂರದೂರಾಗುವುದು !

ಚಂದ್ರ :—ತೇಜಿಗಳ ನಳವಡಿಸಿ ಸಿದ್ಧರಾಗುವೆವು
ಲೇಖನವ ಬರೆದಿಡಿ ! (ಹೊರಡುವನು)
ಪರದೇ ಬೀಳುವುದು.

## ದೃಶ್ಯ ೩

[ಕುಂತಳನಗರದ ಬಾಹ್ಯೋಪವನ. ವೀರಸೇನ, ರಣಸಿಂಹ, ಚಂದ್ರಹಾಸ ಮೂವರೂ ಬರುವರು]

ಚಂದ್ರ :—ಮಿತ್ರರೇ ಇದೆ ಕುಂತಳನಗರಿಯ ಬಾಹ್ಯೋಪ
ವನವು ನಯಸರದ ಕೋಗಿಲೆಯ ಸಾದರದ
ನುಡಿಯೆಮ್ಮ ಕರೆಯುವಂತಿದೆ ಕೇಳಿ !

ರಣಸಿಂಹ :— ಶಶಿಹಾಸ,
ದಿನವೆರಡಳೊಳುಗಿಪ ಪಯಣಮಂ ಬಂದರೊಳೆ
ಪೂರೈಸಿ ಬಂದಿಹೆವು ! ದಾರಿಯುದ್ದಕು ನಮ್ಮ
ಮೇಲ್ ಶುಭದ ಮಳೆ ಸುರಿದುಹೋಯ್ತು. ಎಲ್ಲಿಯುಂ
ಕಣ್ಗೆ ಶುಭಶಕುನಗಳೆ ತೋರಿದುವು.

ವೀರಸೇನ :— ಮೊದಲು
ಕುಂಕುಮ ಸುರಂಜಿತ ಚಂದ್ರಾಂಗದಿಂ ಮೆರೆವ
ನೂತನ ವಧೂವರರು ಬಂದರೆದುರಾಗಿ ।

ಚಂದ್ರ :—
ಆಮೇಲೆ ಸಮುಸದಾಕಾರದಿಂ ಬರುತಿರ್ದ
ಭೂಸುರೋತ್ತಮರಿರ್ವರಂ ಕಂಡು ನಮಿಸಿದೆವು !

ರಣಸಿಂಹ:—ಎಳಗರುವೆರಸಿ ಬರ್ಪ ಗೋಮಾತೆ ತೋರಿದಳು.

ವೀರಸೇನ :—
ಆಮೇಲೆ ರಮಣೀಯ ಕುಸುಮ ಫಲಮಂ ಕೊಂಡು
ನಿನಗೀಯುತೈತಹ ವನಾಧಿಪರ ನೋಡಿದೆವು.

ಚಂದ್ರ :—
ತಳಿತಬನವಿಲ್ಲಿನ್ನುನೆದುರುಗೊಂಡಿಹುದು !
ಮಿತ್ರರೇ, ಹರಿಗಳಿಗೆ ನೀರ್ಕುಡಿಸಿ ಎಳವುಲ್ಲಿ
ನಾಹಾರಮಂ ಕೊಟ್ಟು ಮರದ ತಣ್ಣೆಳಲಲ್ಲಿ
ಆಯಸವ ಪರಿಹರಿಸಿಕೊಳ್ಳಿ, ಹೋಗಿ ।
ನಾನಿಲ್ಲೆ ಬನದಲ್ಲಿ ಅಡ್ಡಾಡಿ, ತರುವಾಯ
ನಿಮ್ಮೆಡೆಗೆ ಬರುವೆ.

ರಣಸಿಂಹ :— ಆಗಲಿ, ಬೇಗ ಬಾ ! (ತೆರಳುವರು)

ಚಂದ್ರ :—(ಸಾಲಗ್ರಾಮವನ್ನೂ ವಿಷಯೆಯಿತ್ತ ರನ್ನದಲರನ್ನು ತೆಗೆದು ನೋಡುವನು)
ಎಲೆಬನವೆ, ಹದಿಮೂರು ವರ್ಷಗಳ ಹಿಂದೆ
ನಿನ್ನಂಕಪೀಠದೆಡೆ ನಲಿದಾಡಿದೋರ್ವನಂ
ನೀನು ಮರೆತಿಹೆಯೇನು ? ನೀನು ನೆನೆಯುವೆಯೇನು ?
ಚಳಿಗಾಲ, ಮಳೆಗಾಲ, ಬೇಸಿಗೆಗಳೆನಿತೊ
ಬಂದು ಹೋದುವು. ಆದರೂ ನನ್ನ ಎದೆಯಲ್ಲಿ
ನೀನೊತ್ತಿದಾಮುದ್ರೆ ಮಾಸದಿಹುದಿನ್ನೂ !
ಹಳೆಯ ನೆನಪುಗಳೆಲ್ಲ ಮನದಿ ಮೂಡಿದಪುವಿಂದು ;
ಅಂದು ಪಸುರುಡೆಯ ನುಟ್ಟಿಹಳು ಬನದೇವಿ ;
ಅಂದೆಸೆದ ನಸುಗೆಂಪೆ ಮೆರೆಯುತಿದೆ ಹೂಗಳಲಿ ;
ಅಂದಿಲ್ಲಿ ಸುಳಿದ ಬನಗಾಳಿಯೇ ಸುಳಿಯುತಿಹು
ದಿಂದು. ಆದರೂ ಇಂದೆನ್ನ ಮನದಲ್ಲಿ
ಬೇರೊಂದು ಭಾವ ಸಂಚರಿಸುತಿದೆ. ಎದೆಯಲ್ಲಿ
ಪ್ರೇಮಮೂರ್ತಿಯ ಚಿತ್ರವೊಂದು ನಲಿದಾಡುತಿದೆ.
ಒಂದು ಸಲ ಕನಸೆಂದು ತೋರುವುದು. ಮತ್ತೊಂದು
ಸಾರಿ ನೆನಪೆಂದು ತೋರುವುದು. ನಿಜವರಿಯೆ !
ಬಗ್ಗಿಸಲೆ ಕೋಗಿಲೆಯೆ ತಳಿತಮಾಮರದಲ್ಲಿ
ಮರೆಗೊಂಡು ! ಹಾಡೆಲೈ ಶುಕಗಳಿರ ! ನೊರೆಯಿರೈ
ಪರಮೆಗಳೆ ಹಾರಾಡಿ ಬಂಡುಂಡು ! ಅಲೆಯೆಲೈ
ಬನಗಾಳಿ ಅಗಲಿದಿನಿಯಳನರಸುತಿಹ ವಿರಹಿ
ಯಂತೆ ! ವನರಮೆಯೆ ವಂದನೆಯು ನಿನಗೆ !
ನೊಬಗಿನಲಿ ಹರಿಯಿಹನು ! ಹರಿಯ ನೊಬಗಾಗಿಹನು !
ತಳಿತೆಸೆವಮಾಮರದ ಕರಿಯ ತಣ್ಣೆಳಲಲ್ಲಿ
ಹಸುರ ಮೇಲ್ಮಲಗಿ ಮಾರ್ಗಶ್ರಮವ ಕಳೆಯುವೆನು.
[ತೋಳನ್ನು ತಲೆದಿಂಬುಮಾಡಿ ಮಲಗುವನು ವಿಷಯೆ ಚಂಪಕಮಾಲಿನಿ ಸಖಿಯಾದ ಪಂಕಜೆ ಇವರು ಬರುವರು]

ವಿಷಯೆ :—
ಬನದ ಪೆಂಪೆಂತು ಮನವೋಹಿಪುದು ! ನೋಡಿದೆಯಾ
ತಂಗಿ ? ಬನದೇವಿ ತನ್ನಿನಿಯನಾಗಮನ
ವಂ ಬಯಸಿ ಪಸುರುಡೆಯ ನುಟ್ಟುಪೊಂದೊಡವೆಗಳ
ತೊಟ್ಟು, ನವಕುಸುಮಗಳ ಮಾಲೆಯಂ ಮುಡಿದು
ಮುಡಿಯಲ್ಲಿ, ಮೆರೆವ ಪೂಗಿಂಪಿನಿಂ ಪಣೆಗೆ
ಬಟ್ಟಿಟ್ಟು, ಮೈಗೆ ಬಿರಿದಲರಕಂಪಂ ಪೂಸಿ,
ಕಾಣಿಕೆಯ ಕೊಡಲೆಂದು ಕೈಯಲ್ಲಿ ಹಣ್ಣುಗಳ
ಗೊಂಚಲುಗಳಂ ಪಿಡಿದು ಕಾದಿಹಳೊ ಎಂಬಂತೆ
ತೋರುತಿದೆ.

ಚಂ. ಮಾ :—ನಿನ್ನಂತೆಯಲ್ಲವೇ ಬನದೇವಿ ?

ಪಂಕಜೆ :—ವಿಷಯೆ ಯಾರಂಬಯಸಿ ಕಾದಿಹಳು, ಚಂಪಕಾ?

ಚಂ. ಮಾ :—
ಅವಳ ಪೊಸಜವ್ವನದ ನೋಡಿದರೆ ತೋರುವುದು
ಯಾರನೋ ಕಾಯುತಿಹಳೆಂದು !

ವಿಷಯೆ :— ಕಾಯುವಳು
ನಾನಲ್ಲ ನೀನು !

ಚಂ. ಮಾ :— ನಿನ್ನೆ ನೀನಾಕೊಳದ
ಮಣಿಶಿಲಾ ಸೋಪಾನದಲ್ಲೊಬ್ಬಳೇ ಕುಳಿತು
ಯಾವ ಸುಂದರ ಮೂರ್ತಿಯಂ ನೆನೆಯುತ್ತಿದ್ದೆ ?
ನಾನು ಬಳಿಸಂದರೂ ನೀನರಿಯಲೇ ಇಲ್ಲ;
ನಾನು ಕರೆದರು ನಿನಗೆ ಕೇಳಿಸಲೆ ಇಲ್ಲ.
ಬಾಹ್ಯಲೋಕವ ಮರೆತು ಏಕಾಗ್ರಚಿತ್ತದಿಂ
ಧ್ಯಾನಿಸುವ ಯೋಗಿ ಯಂತಾಗಿ ಬಿಟ್ಟಿದ್ದೆ !
ನಿನ್ನ ಚಿಂತೆಯ ಪರಮ ಪುರುಷನಾರು ?

ವಿಷಯೆ :—
ತೆಂಬೆಲರ ಸೊಗಸಿಂಗೆ ತಲೆದೂಗುವಂಬುಜಗ
ಳೆಡೆಯಲ್ಲಿ ಮಂಜುಳ ನಿನಾದದಿಂ ನೊರೆದಿರ್ದ
ತುಂಬಿಗಳ ಬಿನದಮಂ ಪರಿಕಿಸುತಲಿದ್ದೆ.

ಚಂ. ಮಾ :—
ಒಚ್ಚೇರೆಗಣ್ಣ ಕೋಮಲೆಯೆ, ಮನಸಿಜನ
ಮಸೆದಂಬೆ, ನಿನ್ನ ಕಂಗಳಲೇಕೆ, ನಾನು
ಬಳಿಸಾರೆ ಕಂಬನಿಗಳಾಡಿದವು ? ಕಲಕೀರ
ವಾಣಿಯೇ, ಕಂಠ ಗದ್ಗದವಾದುದೇಕೆ ?
ತೊಂಡೆವಣ್ತುಟಿಯೇಕೆ ಕಂಪಿಸಿತು ? ಕೆಂದಾವ
ರೆಯ ನಗುವ ಮೊಗದಲ್ಲಿ ಮಲ್ಲಿಗೆಯ ಹೊಂಬಣ್ಣ
ನಸುಮಿಂಚಿತೇಕೆ ? ಎಳವಳ್ಳಿಯಂತಿರುವ
ಕೆನ್ನೆಯಲ್ಲಿ ಬೆವರಿಳಿಯಿತೇಕೆ ?

ಪಂಕಜೆ :— ನೀನಿಲ್ಲಿ
ಗೈತರುವ ಮುನ್ನವಳು ಪ್ರೇಮಗೀತಿಕೆಯೊಂದ
ನಿಂಪಾಗಿ ಹಾಡುತ್ತಿದ್ದಳು ನಾನು ಮಾಮರವ
ನಟ್ಟಿರುವ ಮಲ್ಲಿಗೆಯ ಒಳ್ಳಿಯಲ್ಲಿ ಹೂ ಕೊಯ್ಯು
ತಿದ್ದಾಗ ಆಲಿಸಿದೆ ! ಹಾಡಲಿಲ್ಲವೆ ವಿಷಯೆ ?

ವಿಷಯೆ :—
ಪಂಕಜೆ, ನಿನಗೆ ಯಾವಾಗಲೂ ಸಂಗೀತದ
ಹುಚ್ಚು, ನೀನಂದು ಶ್ರೀ ಕೃಷ್ಣನೊಡಗೂಡಿ
ಗೋಪಿಯಾಗಿದ್ದೆಯೋ ಏನೋ !

ಪಂಕಜೆ :— ನೀನು
ರಾಧೆಯಾಗಿದ್ದೆಯೋ ಏನೊ ! ಯಾವಾಗಲೂ
ಯಾವನೊಬ್ಬನ ನೆನೆದು ಚಿಂತಿಸುವೆ !

ಚಂ. ಮಾ :— ವಿಷಯೆ, ಅದು ಇರಲಿ,
ನಿನ್ನೆ ಹಾಡಿದ ಹಾಡು ಹಾಡೀಗ !
(ವಿಷಯೆ ಸುತ್ತ ನೋಡಲು)
ಭಯಬೇಡ ; ಸುತ್ತ ನೋಡುವುದೇಕೆ ? ಯಾರೂ ಇಲ್ಲಿಲ್ಲ.

ವಿಷಯೆ :— ಅದಕಲ್ಲ ;
ಅಂಗಜನ ಸೊಕ್ಕಾನೆ ; ನಿನಗೆ ಮಾಹುತನಿಲ್ಲ;
ಸೊಕ್ಕಿರುವೆ. ಇನ್ನೆನಿತು ದಿನಸೊಕ್ಕು, ನೋಡುವೆನು ;
ಆ ಕೊಳದೊಳಿದ್ದ ಅರಸಂಚೆಗಳು ಗುಂಪಾಗಿ
ಮಾಲೆಮಾಲೆಗಳಾಗಿ ಹಾರುತಿಹವೇಕೆಂದು
ಬೆರಗಾಗಿ ನೋಡಿದೆನು.

ಪಂಕಜೆ :—ಅದಕೇಕೆ ಬೆರಗು ?
ನಿನ್ನ ನಡೆಯವಿಲಾಸಮಂ ಕಂಡು ಕಲಹಂಸ
ಗಳು ನಾಚಿ ಕಾಲಿಂದೆ ನಡೆಯಲೊಲ್ಲದೆ ನಭಕೆ
ಹಾರಿದವು ;

ಚಂ. ಮಾ :— ಅಲ್ಲದೇ ನೀರಮೇಲಕೆ ಹಾರಿ
ಮಿಂಚಿ ಮುಳುಗುವ ಮೀನ್ಗಳೀಲೋಲ ಲೋಚನೆಯ
ದಿಟ್ಟಿಗಳ ಕಂಡು ತಮ್ಮಾಟ ಹಾಸಟಿಯಾಗ
ದಿರೆ ಲಜ್ಜೆಯಿಂದಾಳದೊಳ್ಮುಗಿದುವು ; ಪಾಪ
ಅಂಚೆಗಳಿಗಾಹಾರ ದೊರಕದಿರೆ ಹಾರಿದವು

ವಿಷಯೆ :—
ರಸಿಕತೆಯ ಕಡಲ ಕಡೆಯಲು ಮದನ, ರಸಲಕ್ಷ್ಮಿ
ನೀನುದುಸಿ ಬಂದೆಯೆಂದು ತೋರುವುದು :

ಪಂಕಜೆ :—ವಿಷಯೆ, ಆ ಹಾಡು ;

ಚಂ. ಮಾ :— ಹೌದೌದು, ಮರೆತಿದ್ದೆ.
ಕಲ್ಮಣೆಯ ಮೇಲ್ಕುಳಿತು ಗೀತೆಯನು ಕೇಳೋಣ ;
(ಎಲ್ಲರೂ ಕುಳಿತುಕೊಳ್ಳುವರು)

ವಿಷಯೆ :—ನಾ ಹಾಡಲೊಲ್ಲೆ,

ಚಂ. ಮಾ :—ಬಿಂಕವೇತಕೆ ನಿನಗೆ; ಹಾಡಬಾರದೆ ಸುಮ್ಮನೆ

ಪಂಕಜೆ :—
ಹಾಗಲ್ಲ ; ಕವಿಗಳನು, ರಸಿಕರನು ಕೆಣಕಿದರೆ
ನಮಗೆ ಲಾಭ ! ಸುಮ್ಮನೇ ಬಿಚ್ಚುವರೆ ಮೂಟೆಯನು ?
ರಸತುಂಬಿ ಬಿರಿಯುತಿಹ ಕರಿಯ ಕಬ್ಬನು ಬರಿದೆ
ಬೇಡಿದೊಡೆ ತನ್ನೆಲೆಯ ಸವಿವೊನಲ ನೀಡುವುದೆ ?
ಗಾಣದಲಿ ಹಿಂಡಿದರೆ ದೊರಕುವುದು ರಸವು !

ವಿಷಯೆ :—ಸಾಕು, ನಿನ್ನುಪಮಾನ.

ಪಂಕಜೆ:— ಸಾಕು, ನಿನ್ನನುಮಾನ !

ಚಂ. ಮಾ :— ಹಾಡು ; ಸಾಕು ನಿನ್ನಭಿಮಾನ !

ವಿಷಯೆ :—(ಹಾಡುವಳು)
ಬನವು ತಣ್ಣೆಳಲಿನಲಿ
ತಳಿರ ಶಯನದಿ
ಇನಿಯ ನೆಮ್ಮ ಕಾಯುತಿಹನು
ಬಾರೆಲೆ ಕೆಳದಿ !

ಚಂ ಮಾ :—(ನಗುತ್ತ) ಎಲ್ಲಿ ಪಂಕಜೆ, ಕಾಯುತಿಹನಂತೆ !

ಪಂಕಜೆ :— ನೋಡಲ್ಲಿ,
ತಳಿತೆಸೆವ ಚಂಪಕವೆ ಅವಳಿನಿಯ ನಿರಬೇಕು !

ವಿಷಯೆ :—
ಸಾಕು, ಬಾಯ್ಮುಚ್ಚು, ಪಂಕಜೆ ! ನಿನ್ನ ಮನದನ್ನ
ಮುದುಕನಂತೆಲರಿನಲಿ ಚೀರುತ್ತ ತಲೆಯಲೆವಾ
ಬಿದಿರ ಮೆಳೆಯಿರಬೇಕು !

ಚ. ಮಾ :— ಬಿಡು ತಂಗಿ, ಸಿಗ್ಗೇಕೆ !
ನಿನ್ನ ಇನಿದನಿಯ ನಾಲಿಸೆ ಬನವು ಮೌನಿಯಂ
ತಿದೆ ನೋಡು ! ಹಾಡು !

ವಿಷಯೆ :— ನಾನೊಲ್ಲೆ ; ನೀವು ಪರಿಹಾಸ್ಯ ಮಾಡುವಿರಿ!

ಚಂ. ಮಾ :— ಇನ್ನು ಮಾಡುವುದಿಲ್ಲ ; ಹೇಳು.

ವಿಷಯೆ :—(ಹಾಡುವಳು)

ಬನದ ತಣ್ಣೆಳಲಿನಲಿ
ತಳಿರ ಶಯನದಿ,
ಇನಿಯನೆಮ್ಮ ಕಾಯುತಿಹನು
ಜಾರೆಲೆ ಕೆಳದಿ !
ಅಲ್ಲಿ ಕಲಕಂಠಗಳು
ಹಾಡುತಿರುವುವು !
ಅಲ್ಲಿ ಗಿಳಿವಿಂಡುಗಳು
ಕೂಗುತಿರುವುವು !

ಪಂಕಜೆ :—ಗಾನವೆನಿತಿಂಪು ! ಎದೆಯುಬ್ಬಿ ಹಾರುತಿಹುದೆನಗೆ !

ಚಂ. ಮಾ :— ಗಾನಕ್ಕೆ ಮನಸೋಲದವರುಂಟೆ ? ಇದ್ದರವನತಿ ಪಾಪಿ. ಅವನೆದೆಯು ನರಕ. ನೋಡಲ್ಲಿ, ಬಯಲೊಳಿಹ ಗೋವುಗಳು ತಲೆಯೆತ್ತಿ ಕಿವಿಯ ನೆಟ್ಟಗೆಮಾಡಿ ಪುಲ್ಮೇವುಗಳ ಮರೆತು ಮೈಮರೆತು ಗಾನವನೆ ಕೇಳುತಿಹವೆಂತು !

ಪಂಕಜೆ :—ಹಾಡೆನ್ನ ಸರಸತಿಯು ಬೀಣೆಯೇ, ಹಾಡು !

ವಿಷಯೆ :—(ಹಾಡುವಳು)

ಎಳದಳಿರೊಳು ನಲಿನಲಿಯುತ
ಮಂದಮಾರುತ
ಮೆಲುನಡಿಯಲಿ ಸುಳಿದಲೆವನು
ಮಧುವ ಸಾರುತ !
ಬನದ ತಣ್ಣೆಳಲಿನಲಿ
ತಳಿರ ಶಯನದಿ,
ಇನಿಯನೆಮ್ಮ ಕಾಯುತಿಹನು
ಜಾರೆಲೆ ಕೆಳದಿ !

ಪಂಕಜೆ :—ಇದೇನು ನಿಲ್ಲಿಸಿದೆ !

ವಿಷಯೆ :— ಹಾಡು ಪೂರೈಸಿತು.

ಪಂಕಜೆ :—ಸುಳ್ಳನಾಡುವೆಯಲ್ಲ; ಮುಂದಿಹುದು, ನಾಬಲ್ಲೆ!

ಚಂ. ಮಾ :—ಹೇಳು ನಾಚಿಕೆಯೇಕೆ ವಿಷಯೆ ! ನಾವೆಲ್ಲ ನಿನ್ನಂತೆ ! ತರಳೆಯರು ! ಮುಗ್ಧೆಯರು! ಜೌವನೆಯರು !

ವಿಷಯೆ :—(ಹಾಡುವಳು)

ಸುಮಗಳನು ಕೊಯ್ದು ನೇಯ್ದು
ಮಾಲೆ ಸೂಡುವ !
ಮನಸಿಜನ ಕಣೆಗಳಂತೆ
ಹೋಗಿ ತಾಗುವಾ !
ಬನದ ತಣ್ಣೆಳಲಿನಲಿ
ತಳಿರಶಯನದಿ,
ಇನಿಯನೆಮ್ಮ ಕಾಯುತಿಹನು
ಜಾರೆಲೆ ಕೆಳದಿ !

ಪಂಕಜೆ :— ವಿಷಯೆ, ನೀನಿತು ರಸಿಕಳೆಂದು, ನಾನು ತಿಳಿದಿರಲಿಲ್ಲ.

ವಿಷಯೆ :— ಬಿಡು, ಸಾಕು, ನೀನೊಂದು ಹಾಡು ಹಾಡಲೇ ಬೇಕು.

ಪಂಕಜೆ :— ನೀನು ಹಾಡಿದಮೇಲೆ ನಾನು ಹಾಡುವುದೆ ! ಹೊತ್ತಾಯ್ತು, ನಾಳೆ ಹಾಡುವೆ ನಾನು ! ಹೂಕೊಯ್ದುಕೊಂಡೀಗ ಹೋಗೋಣ !

ಚಂ. ಮಾ :— ಹೌದು, ಮೇಲೇಳಿ !

ವಿಷಯೆ :— ನೀವೆಲ್ಲ ಜಾಣೆಯರು ! ನನ್ನಂತಹರು ನಿಮ್ಮ ಕೂಡಿ ಬರಬಾರದು !

ಪಂಕಜೆ :— ನಾನಲ್ಲಿ ನಳನಳಿಪ ಸುರಗಿ ಮರವನು ಹತ್ತಿ ಹೂಕೊಯ್ಯುವೆ (ಹೋಗುವಳು)

ಚಂ. ಮಾ :—ನಾನದೋ, ಅಲ್ಲಿ ಅರಳಿಹ ಜಾತಿಗಳ ಕೊಯ್ವೆ! (ಹೋಗುವಳು)

ವಿಷಯೆ :—ನಾನಿಲ್ಲೆ ಮಾಮರದ ಬಳಿ ಸೇರಿ ಮಲ್ಲಿಗೆಯ ಮೊಗ್ಗುಗಳ ಕೊಯ್ಯುವೆನು.

(ಮುಂದೆ ಹೋಗಿ ಮಲಗಿಹ ಚಂದ್ರಹಾಸನನ್ನು ನೋಡುವಳು, ಬೆಚ್ಚಿ ಹಿಂಜರಿದು)

ಯಾರಿವನು ? ತೋಳ ತಲೆ ಗಿಂಬಿನ ತಳಿರ್ವಸೆಯಮೇಲೆ ತಂಗಾಳಿ ಗೊಡ್ಡಿದ ಮೆಯ್ಯುಸೊಗಸಿಂದೆ ಮೆರೆದು ನಿದ್ರಾಲೋಲನಾಗಿಲ್ಲಿ ಮಲಗಿಹಂ ಲೋಕತ್ರಯಂ ತನಗೆ ವಶವರ್ತಿಯಾದುದಿನ್ನೇಕೆ ಧಾವತಿಯೆಂದು ಸುಖದಿಂದೆ ಪವಡಿಸಿದ ಕಬ್ಬುಬಿಲ್ಲನೆನೆ ಮನ ಮೋಹಿಸುತ ನಿದ್ರಿಪನು ! ಬೇಸರದೆ ಚಾಂದಳದೊಳಾವಗಂ ತಿರುತಿರುಗಿ ಸಾಕಾಗಿ ಇಳೆಗಿಳಿದು ಪವಡಿಸಿಹ ಸೋಮನಂತೆ ಶಾಂತನಾಗಿಹಂ !

(ಪುನಃ ಹತ್ತಿರ ಹೋಗಿ ನೋಡುವಳು. ನಾಚುವಳು, ನಗುವಳು)

ನಮ್ಮ ಸಲ್ಲಾಪಗಳನೆಲ್ಲಿ ಕೇಳಿದನೊ ಏನೋ ! [ತಿರು
ಎನ್ನ ಕೆಳದಿಯರೆಲ್ಲಿ ? (ಸುತ್ತ ನೋಡಿ) ಎನ್ನೆಡೆಯು ಹಾರು
ತಿಹುದೇಕಿಂತು ತಪ್ಪುಮಾಡಿದ ಮಗುವಿನಂತೆ !
ಚಂದ್ರನಂ ಮೂದಲಿಪ ಸೊಬಗಿನಿಂ ಮೆರೆವನಿವನಾರು !
ಒರ್ವನೊರ್ವರನಗಲರಶ್ವಿನೀ ದೇವತೆಗಳು ;
ಉರ್ವ ನಳ ಕೂಬರ ಜಯಂತಾದಿ ಸುರತನುಜ
ರುರ್ವರೆಗದೇಕೆ ಬಹರಿನ ಶಶಿಗಳಾದೊಡಂ
ಇಪ ಉಷ್ಣ ಶೀತದ್ಯುತಿಗಳು. ಅವರಲ್ಲ.
ಗೀರ್ವಾಣ ಯಕ್ಷ ಕಿನ್ನರ ಸಿದ್ಧ ಗರುಡ ಗಂ
ಧರ್ವರೊಳಗಾವನೋ ? ಮನುಜನಲ್ಲೀತಂ !

[ಸುತ್ತ ನೋಡುವಳೊಮ್ಮೆ ನೂಪುರವಲುಗದಂತೆ ; ಹತ್ತೆ ಸಾರುವಳೊಮ್ಮೆ ಸೋಂಕಲಿಂತಹುದೆಂದು; ಮತ್ತೆ ಮರಿದಪಳೊಮ್ಮೆ ! ಹೆಜ್ಜೆ ಹೆಜ್ಜೆಯಮೇಲೆ ಪಲ್ವಳಮ್ಮದೆ ನಿಲ್ವಳು ! ಚಿತ್ತದೊಳ್ನಿಶ್ಚೈಸಿ ನೆರೆಯುಲೆಳಸುವಳೊಮ್ಮೆ. ಹೊತ್ತಲ್ಲದನುಚಿತಕೆ ಬೆದರಿ ಹಿಂಗುವಳೊಮ್ಮೆ ; ಪತ್ತಳದ ಬೇಡದೊಳ್ಬೆಂಡಾಗಿ ವಿಷಯೆ ನಿಂದಿರ್ದಳಾತನ ಪೊರೆಯೊಳು]

ಮುತ್ತಿಡುಪೆನೆಂದೊಡಿವನೀ ನಿದ್ದೆಗಾಗುವುದು
ಭಂಗ! ಗಾಢದಿಂದಪ್ಪುವೆನೆ ಹೊತ್ತಲ್ಲ!
ಎನ್ನ ಕೆಳದಿಯರಿಲ್ಲಿ ಗೈತಂದು ನೋಡಿದರೆ!

ಕರುಬುವರು ! (ಕಂಚುಕದ ಸೆರಗಿನಲ್ಲಿದ್ದ ಪತ್ರಿಕೆಯ ನೋಡಿ)

ಕಂಚುಕದ ಸೆರಗಿನಲಿ ಪತ್ರಿಕೆಯಿ
ದೇನು ? ಬಿಚ್ಚಿ ಮುದ್ರೆಯ ನೊಡೆದು ನೋಡುವೆಂ !
(ಬಿಚ್ಚಿ ಮುದ್ರೆಯನೊಡೆದು ನೋಡಿ ವಿಸ್ಮಯದಿಂದ)
ಏನಿದೆನ್ನಯ ತಾತನಕ್ಷರವು ! ಆತನೇ
ಬರೆದ ಪತ್ರಿಕೆಯು ಇದು ! ಇರಲಿ ಓದುವೆಂ !
(ಪತ್ರಿಕೆಯನ್ನು ಓದುವಳು)
" ಶ್ರೀಮತ್ಸಚಿವ ಶಿರೋಮಣಿ ದುಷ್ಟಬುದ್ಧಿ ಸು
ಪ್ರೇಮದಿಂ ತನ್ನಮಗ ಮದನಂಗೆ ಮಿಗೆಪರಸಿ
ನೇಮಿಸಿದ ಕಾರ್ಯ ಯಿಾಚಂದ್ರಹಾಸಂ ಮಹಾ ಹಿತ
ನೆಮಗೆ, ಮೇಲೆ ನಮ್ಮ
ಸೀಮೆಗರಸಾದಪಂ ; ಸಂದೇಹಯಿಲ್ಲದಕೆ !
ಸಾಮಾನ್ಯದವನಲ್ಲ. ನಮಗೆ ಮುಂದಕೆ ಸರ್ವ
ಥಾ ಮಿತ್ರ ನಪ್ಪನೆಂದೀತನಂ ಕಳುಹಿದೆವು ನಿನ್ನಬಳಿ
ಗಿದನರಿವುದು.
ಹೊತ್ತುಗಳೆಯದೆ, ಬಂದಬಳಿಕಿವನ ಕುಲ, ಶೀಲ
ವಿತ್ತ ವಿದ್ಯಾವಯೋವಿಕ್ರಯಂಗಳ ನೀಕ್ಷಿ
ಸುತ್ತಿರದೆ ವಿಷವ ಮೋಹಿಸುವಂತೆ ಕುಡುವುದೀತಂಗೆ
ನೀನದರೊಳೆಮಗೆ !
ಉತ್ತರೋತ್ತರಮಪ್ಪುದಾಂ ಬೇಗ ಚಂದನಾ
ವತಿಯಿಂದ ರಾಜಕಾರ್ಯವ ಮುಗಿಸಿ ಬಹೆನೆನ್ನ
ಚಿತ್ತವಂ ನೀನರಿತು ಹಿಂಜರಿಯದೆಲ್ಲಮಂ ಪೂರೈಸು
ಯುಕ್ತಿಯಿಂದ "—
ವಿಷವಮೋಹಿಸುವಂತೆ ! ಇದರರ್ಥವೇನು ?
ಮನ್ಮಥನ ಮಾರುತಿಹ ಗಾಡಿಯಿಂದೆಸವಿವಗೆ
ವಿಷವ ನೀಡುವುದುಂಟೆ ? ಪುಸಿಮಾತು !ಪುಸಿಮಾತು
ಈತಂ ತಮಗೆ ಮಹಾಹಿತನೆಂಮು, ತಮ್ಮ ಧರೆ
ಗೀತನರಸಹನೆಂದು ; ಕುಲಶೀಲವಿದ್ಯೆಗಳ
ನೀತನೊಳರಸಬೇಡ ಮುಂದಕೀತಂ ನಮಗೆ
ಸರ್ವಥಾ ಮಿತ್ರನಾಗುವನೆಂದು, ನೀನು
ಈತಂಗೆ ವಿಷಯೆ ಮೋಹಿಸುವಂತೆ ಕುಡುವುದೆಂ
ದಾತಾತನಣ್ಣಂಗೆ ಬರೆಸಿ ಕಳುಹಿದ ಪತ್ರ
ಮೇ ತಪ್ಪಿದಿದು ! ಕಡುಚೆಲ್ವನಾದವರನಂ ಕಂಡು
ನಿಶ್ಚೈಸಿ ತಡೆಯದೀತಂಗೆ ನಾಂ ಮೋಹಿಸುವ
ತೆರದಿಂದ ಕುಡುವುದೆಂದಲ್ಲಿಂದೆ ನನ್ನ ಪಿತ
ನೀತನಂ ಕಳುಹಿದಂ ! ಒಡಗೂಡದಿರದೆನ್ನ
ಮನದಣಿಕೆ ಪತ್ರಿಕೆಯೊಳೆಡಹಿ ಬರೆದಕ್ಕರದ
ಬೀಳ್ದೊಡದರಿಂದೆ ಕೆಡುವದಗ್ಗದ ಕಜ್ಜ
ತಪ್ಪಿರ್ದಲಿಪಿಯೊಳ್ವಕಾರಮಂ ತೊಡೆದಲ್ಲಿ
ಗೊಪ್ಪುವ ಯಕಾರಮಂ ಬಳಿಯೊಳಿಹ ಮಾಮರದೊ
ಳಿಪ್ಪ ನಿರ್ಯಾಸಮಂತೆಗೆದು ಕಿರುವೆರಳ
ಉಗುಗೊನೆಯಿಂದೀಗಲೇ ತಿದ್ದಿ ಬರೆದಪೆಂ !

(ಮಾಮರದ ರಸದಿಂದ ಉಗುರು ಕೊನೆಯಲ್ಲಿ ತಿದ್ದಿ ಮೊದಲಿನಂತೆಯೇ ಕಟ್ಟುವಳು. ಅಷ್ಟರಲ್ಲಿ " ವಿಷಯೆ ವಿಷಯೆ " ಎಂದು ಸಖಿಯರು ಕೂಗುವರು.)

ಸಖಿಯರೆನ್ನಂ ಕೂಗುತಿಹರು. ಮನಮಿವನ
ರೂಪಿಂಗೆ ಸೆರೆಸಿಕ್ಕಿ ಚಲಿಸದಿದೆ. ದಿಟ್ಟಿ
ಮುರಿಯದಿದೆ, ನಡೆಯಲಡಿಯಚಲವಾಗಿಹುದು.

(ಹಿಂದೆ ನೋಡುತ್ತಾ ನೋಡುತ್ತಾ ಹೋಗುವಳು. ಆ ಮೇಲೆ ಚಂದ್ರಹಾಸನು ನಿದ್ದೆಯಿಂದೆಚ್ಚೆತ್ತು ಸುತ್ತನೋಡಿ ಮೇಲೇಳುವನು.)

ಚಂದ್ರ :—

ಕನಸಿನಲಿ ಕೇಳಿದೆನೆ ಅವ್ಯಕ್ತ ಮಧುರವಾ

ದಾಗಾನ ? ಕನಸಿನಲಿ ನೋಡಿದೆನೆ ಆ ದಿವ್ಯ
ಸೌಂದರ್ಯಮೂರ್ತಿಯಂ ! ಕನಸಲ್ಲ ! ಕನಸಂತು
ತಳೆಯಾಗಿ ತೋರ್ಪುದೇ ? ಪುಣ್ಯಮಂಗಳ ಮಧುರ
ಮೂರ್ತಿಯೊಂದೆನ್ನಬಳಿ ಸುಳಿದಾಡಿದಂತಾಯ್ತು ;
ಮುಂದೆ ಎಂದೆಂದು ಆ ಸ್ವಪ್ನ ಸಾಮ್ರಾಜ್ಯದಲಿ
ಸಂಚರಿಪ ಭಾಗ್ಯವೆನಗಾಗುವುದೆ ? ಅವ್ಯಕ್ತ
ಮಧುರವಾದಾಗಾನಮಂ ಕೇಳಿ ಸಂತುಷ್ಟಿ
ಹೊಂದುವೆನೆ ! ಪುಣ್ಯಾಮಂಗಳ ಮಧುರಮಯವಾದ
ಆ ದಿವ್ಯ ಸೌಂದರ್ಯ ಮೂರ್ತಿಯಂ ನಿಟ್ಟಿಸುವ
ಸೊಗಯೆನಗೆ ದೊರಕುವುದೆ ? ಹಾ ಮಧುರ ಸ್ವಪ್ನವೇ
ಮಿಂಚಿಮನದಲ್ಲೇಕೆ ಹೊಳೆದಳಿದು ಹೋದೆ ?
ಆ ಕನಸನುಳಿದೆನ್ನ ಹೃದಯಮಂದಿರವೀಗ
ಬರಿದಾಗಿ ತೋರುವುದು ನುಣ್ಚರವನಾಲಿಸದೆ
ಕರ್ಣಕಿವುಡಾಗಿಹುದು : ಮೋಹನದ ರೂಪವಂ
ನೋಡದೆನ್ನಯ ಕಣ್ಗೆ ಕುರುಡುತನ ಬಂದಿಹುದು,
ಮಧುರಮೋಹನ ಮೂರ್ತಿ ಯಾರಾ—ಕೆ ?

ರಣಸಿಂಹ :—(ಬಂದು) ಶಶಿಹಾಸ,
ಇಲ್ಲೇನು ಮಾಡುತಿಹೆ ? ನಿನಗಾಗಿ ಪಾಥೇಯ
ಯಂ ಬಿಚ್ಚಿ ಕಾದು ಕಾದೆಮಗೆ ಸಾಕಾಯ್ತು !
ಬೈಗಾಗಿ, ಹೊತ್ತಿಳಿಯುತಿದೆ ನೋಡು ಪಿರಿದೆನಿಪ
ಕತ್ತಲೆಯ ರಾಶಿಯಂ ಪೊತ್ತುಕೊಂಡುರಿವವೊಲ್
ಕೆಯ ಕಡೆಯೊಳುಳಿದ ಕೆಂಗೆಂಡಮೆನೆ ತರಣಿಯಂ
ಡಲವೆಸೆಯುತಿಹುದಪರದಿಗ್ಭಾಗದಲ್ಲಿ

ಚಂದ್ರ :—
ಬಳಲಿಕೆಯ ನೀಗಲೆಂದಿಲ್ಲಿ ಮಲಗಿದೆನು,
ಒಯ್ಯನೊಯ್ಯನೆ ತೀಡುತಿರುವೆಲರ ಸಂಗದಲಿ
ಕೋಗಿಲೆಯ ಪುಗಿಲಿನಾನಂದದಲಿ, ವನರಮೆಯ
ಸೊಬಗಿನಲಿ ನಿದ್ದೆ ವೆಣ್ಣೈತಂದು ಮೆಲುಮೆಲನೆ
ಕದ್ದೊಯ್ದುಳೆನ್ನಮನವಂ ! ವೀರಸೇನನೆಲ್ಲಿ ?

ರಣಸಿಂಹ :—ಅಲ್ಲಿಯೇ ಕಾದಿಹಂ. ಹೋಗೋಣ, ಬಾ !

ಚಂದ್ರ :— ಮೃದುಮಧುರ
ವಾದ ಸಂಗೀತವಂ ಕೇಳಿದಿರ ನೀವು ?

ರಣಸಿಂಹ :—
ಹೌದು, ಕೇಳಿದೆವು. ಎಲ್ಲಿಯೋ ಬಹುದೂರ
ದಿಂದ ಬರುವಂತಿತ್ತು ! (ಕೆಳಗೆ ನೋಡಿ, ಬೆಚ್ಚಿ)
ಯಾರ ಹೆಜ್ಜೆ ಗಳಿವು ?
ನಿನ್ನಡಿಗಳಲ್ಲ, ಪೂಗಳಸರಾಗದಿಂದಿಡಿದ
ನೆಲದಲ್ಲಿ ಚಿತ್ರಗಾರನು ಚಿತ್ರಿಸಿದ ತೆರದಿ
ಮೇಲೆದ್ದು ತೋರುವುವು, (ಚೆನ್ನಾಗಿ ನೋಡಿ)
ಕೋಮಲೆಯರಡಿಗಳಿವು !

ಚಂದ್ರ :—ಹೇಗೆ ?

ರಣಸಿಂಹ :—
ನೋಡಿಲ್ಲಿ, ಚಿಗುರಿದೆಳವುಲ್ಲು ಕೂಡ
ಮುರಿಯದಿವೆ ! ಪಾದಗಳ ಸಂಸ್ಪರ್ಶದಿಂದ
ಸಂತಸವ ತಾಳ್ದು ನಲಿಯುವಂತಿವೆ ನೋಡು

ಚಂದ್ರ :—ಏನೋ ನಾನರಿಯೆ. ಮಲಗಿದ್ದೆ, ನಾನು,

ರಣಸಿಂಹ :—(ನಗುತ್ತಾ) ಆದರಲ್ಲಿ ಸಂದೇಹವೇನಿಲ್ಲ. ಆದರೆ

ಚಂದ್ರ :—(ಮುಗುಳನಗೆಯಿಂದ) ಆದರೆ ?

ರಣಸಿಂಹ :—
ನಿನ್ನಮೊಗದಲ್ಲೇನು ಸಂತಸದ ಕಳವಳಂ ?
ನಿದ್ದೆಯಲ್ಲಿಹ ಶಾಂತಿ ನನಗೆ ತೋರುವುದಿಲ್ಲ.

ಚಂದ್ರ :—ವೀರಸೇನನು ಬಂದುಬಿಟ್ಟಾನು ಹೋಗೋಣ.

(ಚಂದ್ರಹಾಸನು ಹಿಂತಿರುಗಿ ನೋಡುತ್ತಾ ರಣಸಿಂಹನೊಡನೆ ಹೋಗುವನು)

ಪರದೆ ಬೀಳುವುದು

## ದೃಶ್ಯ ೪.

(ಚಂದ್ರಶಾಲೆ. ಹಾಲುಚೆಲ್ಲಿದಹಾಗೆ ಬೆಳುದಿಂಗಳು. ಅಲ್ಲಿ ವಿಷಯೆಯೊಬ್ಬಳೆ ಕುಳಿತು ಮೈಮರೆತು ಕನವರಿಸುತ್ತಿರುವಳು.)

ವಿಷಯೆ: —
ಎನಿತು ಮಲಗಿಹನು ಮಾಮರದ ತಣ್ಣೆಳಲಲ್ಲಿ
ಮೂಲೋಕದಾನಂದ ಮೂರ್ತಿಮತ್ತಾದಂತೆ !
ವದನವೆಳನಗೆಯೇನು ? ಸ್ವಪ್ನಸ್ಥನಾಗಿಹನು !
ಕನಸಿನಲಿ ಯಾವ ಚೆಲುವೆಯಕಂಡು ನಗುತಿಹನು ?
ನಿನ್ನ ಕನಸಿನ ಕಾಂತೆಯಾದರಾಗುವ ಪುಣ್ಯ
ವೆನ್ನದಾಗಿರಲಿ ! (ಚಂಪಕಮಾಲಿನಿ ಬರುವಳು)

ಚಂ. ಮಾ. :— ಕೌಮುದಿಯ ಪಾಲ್ಗಡಲು
ಮನಮೋಹಿಸುವ ಶಾಂತಿಯಿಂದೆಸೆಯುತಿದೆ, ಕೆಳದಿ !

ವಿಷಯೆ :—(ಬೆಚ್ಚಿ ಎಚ್ಚೆತ್ತುಕೊಂಡು) ಏನೆಂದೆ ?

ಚಂ. ಮಾ. :—ಮಾಧುರ್ಯದಂಬುಧಿಯು ಬೆಳ್ದಿಂಗಳೀ ರಾತ್ರಿ !

ವಿಷಯೆ :—(ಬಿಸುಸುಯ್ದು) ಇರಬಹುದು !

ಚಂ. ಮಾ.—
ಕೆಳದಿ, ಇರಬಹುದೇಕೆ? (ಮರಳಿವಿಷಯೆಬಿಸುಸುಯ್ವಳು)

ಬಿಸುಸುಯ್ಯುತಿಹೆ ಏಕೆ !
ನಿನ್ನೆಯಿಂ ನೀನಿಂತು ಕೊರಗಿಕುಗ್ಗಿಹೆ ಏಕೆ ?
ಪಂಜರದ ಗಿಳಿಯೊಡನೆ ಸರಸಕೇಳಿಯನೇಕೆ
ತೊರೆದಿರುವೆ ? ಪೊಂದೊಡವಗಳನೇಕೆ ಕಳಚಿ
ಬಿಸುಟಿರುವೆ ? ಸಖಿಯರೊಡಗೂಡಿ ನುಡಿಯದೆ ಮೌನ
ವಾಗಿರುವುದೇಕೆ ? ಹೇಳು ಮುದ್ದಿನಕೆಳದಿ ! ಬಿರುನುಡಿಗ
ಳಾಡಿದರೆ ? ನೋಯಿಸಿದರೇ ನಿನ್ನ ? ಬಯಕೆಯನು
ಸಲ್ಲಿಸದೆ ಧಿಕ್ಕರಿಸಿ ನೂಕಿದರೆ ? ಮೈಯ್ಯಲ್ಲಿ
ರುಜೆಯು ತಲೆದೋರಿಹುದೆ ?

ವಿಷಯೆ :— ಏನಿಲ್ಲ, ತಂಗಿ,
ಹೃದಯದೊಳ್ಳೀರ್ಪೊಯ್ದು ಸುಣ್ಣಮರಳುವ ತೆರದಿ
ಬೇಯುತಿದೆ. ಶೀತಳ ಸುಧಾಮಯೂಖನು ಕೂಡ
ಬೆಂಗದಿರ ನಂತಿಹನು ! ಏತಕೋ ನಾನರಿಯೆ !
ವಿಶ್ವವೇ ನನ್ನಮೂದಲಿಪಂತೆ ತೋರುವುದು.
ತಿಳಿಯಾಳದಾಗಸದ ಚುಕ್ಕಿಗಳು ಕೂಡ
ಕಣ್ಣುಮಿಟಿಕಿಸಿ ಎನ್ನಪರಿಹಾಸ್ಯ ಮಾಡುತಿವೆ !
ಬಗ್ಗಿಸುವ ಕೋಗಿಲೆಯು ಕೂಡ ತಳಿರಲ್ಲಡಗಿ
ಎನ್ನಳಲಕಂಡು ಸಂತೋಷದಿಂ ಪಾಡುವುದು !
ನಾನೆಸಗಿದಪರಾಧವೇನಂತೆ ?

ಚಂ. ಮಾ:— ವಿಷಯೆ.
ಎದೆಯಲ್ಲಿ ಹುದುಗಿರುವ ಯಾತನೆಯ ಹೊರಗೆಳೆಯ
ಲೊಲ್ಲೆ ! ಸುಮ್ಮನೇ ಏನೇನೊ ಮಾತುಗಳ
ನಾಡುತಿಹೆ ! ನೀನು ಹೇಳಿದರಾಯ್ತು; ಅಲ್ಲದೊಡೆ
ಇಲ್ಲಿಂದ ತೆರಳುವೆನು : (ಹೋಗುವಂತೆ ನಟಿಸುವಳು)

ವಿಷಯೆ :— ಹೋಗದಿರು, ನಿಲ್ಲು.
ಹೇಳುವೆನು. ನಿನಗಲ್ಲದಿನ್ನಾರಿಗೊರೆಯಲಿ !

ಚಂ. ಮಾ :— ಹೇಳು, ನಾನಾರಿಗೂ ಹೇಳೆ !
[ವಿಷಯೆಯು ಚಂಪಕಮಾಲಿನಿಯ ಕಿವಿಯಲ್ಲಿ ಎಲ್ಲವನ್ನು
ಹೇಳುವಳು. ಅಷ್ಟರಲ್ಲಿ ಪಂಕಜೆ ಓಡಿಬರುವಳು)

ಪಂಕಜೆ :— ಓಹೋ !
ತಪ್ಪಾಯ್ತು, ಕ್ಷಮಿಸೆನ್ನ. ಬಳಿಗೆ ಬರಲೇ ನಾನು !

ವಿಷಯೆ :— ಬಾ, ಪಂಕಜೆ !

ಪಂಕಜೆ :— ಏನು, ಗುಟ್ಟನಾಡುತಲಿದ್ದೆ ?

ವಿಷಯೆ :— ಏನಿಲ್ಲ; ನಿನಗೇಕೆ ?

ಪಂಕಜೆ :— ಲೋಕಕ್ಕೆ ಗೊತ್ತುಂಟು !
ನಿನಗೊಬ್ಬಳಿಗೆ ಗುಟ್ಟು !

ಚಂ. ಮಾ :— ಗೊತ್ತಾಗಿರುವುದೇನು ?

ಪಂಕಜೆ :—
ಈಗರಿತೆ. ಸಖಿಯೇಕೆ ಕೊರಗುತ್ತಿದ್ದಳು ಎಂದು !
ಪಾವಗಿದುಕಿದರುಂಟೆ ? ಮರನ ಕೋಪದೊಳುರಿದು
ಜೀವಿಸಿದರುಂಟೆ ? ಕಾಳ್ಕಿಚ್ಚಿನೊಕ್ಕಳಿಗೊಂಡು
ಜೀವಿತಸುವಿಡಿದು ಬಾಳ್ದವರುಂಟೆ ? ಸುಗ್ಗಿಯಲಿ
ತುಂಬುಪೆರೆ ತಂಗಾಳಿ ಹೂಗಣೆಯರೊಡ್ಡಿದುರು-
ಳಿಗೆ ಬಿದ್ದು ಅಳುಕದಿಹರುಂಟೆ ?

ವಿಷಯೆ :— ಏನು, ನೀನಾಡುವುದು ?

ಪಂಕಜೆ :— ಚಂಪಕಾ, ಕೇಳಿದೆಯ ? ಹೊಸ ಸುದ್ದಿ — !

ಚಂ. ಮಾ :— ಏನದು ?

ಪಂಕಜೆ :— ನನಗೊಂದು ಮಂತ್ರ ತಿಳಿದುಹುದು !

ಚಂ. ಮಾ :— ಗುರುವಾರು ?

ವಿಷಯೆ :— ಆಕೆಯೋಪಸೊ ಏನೊ !

ಪಂಕಜೆ :— ನನ್ನಕ್ಕನದನೆನಗೆ
ಹೇಳಿಕೊಟ್ಟಳು ಇಂದು. ಸಿದ್ಧಿವಡೆದಿಹೆನು.
ಅದನಿಲ್ಲಿ ಜಪಿಸಿದರೆ ನಮ್ಮ ಕೆಳದಿಯ ತಾಪ
ವರಗಳಿಗೆಯಲಿ ಮಾಯವಾಗುವುದು. ನಾ ಬಲ್ಲೆ.

ಚಂ. ಮಾ :— ಜಪಿಸು, ಹಾಗಾದರೆ !

ಪಂಕಜೆ :— ಜಪಿಸಲೇ ವಿಷಯೆ ?

ವಿಷಯೆ :— ಏನಾದರೂ ಮಾಡು !

ಪಂಕಜೆ :— ಹೊಸ ಸುದ್ದಿ ಏನೆಂದು
ಕೇಳಿದೆಯಾ ? ಚಂದನಾವತಿಯಿಂದ ಶಶಿಹಾಸ
ಬಂದಿಹನು ? ಪಾಪ, ವಿಷಯೆಗೆ ತಿಳಿಯನವನು !
ಅಲ್ಲವೇ ವಿಷಯೆ !

ವಿಷಯೆ :— ನಿನಗೇಕೆ ಆ ಚಿಂತೆ ?

ಪಂಕಜೆ :— ನಾಳೆ ಅವನಿಗೆ ಮದುವೆ !

ಚಂ. ಮಾ :— ಯಾರೊಡನೆ !

ಪಂಕಜೆ :— ನಾನರಿಯೆ,
ವಿಷಯೆಯನ್ನೇ ಕೇಳಿ ತಿಳಿದುಕೋ !
(ವಿಷಯೆ ಮೊಗದಿರುಹುವಳು)

ಚಂ. ಮಾ :— ವಿಷಯೆ,
ನೀ ಬಲ್ಲೆಯೇನು ? ನಿಜ ಹೇಳು !

ಪಂಕಜೆ :— ಪಾಪ ! ಬಲು ಮುಗ್ಧೆ! ಅವಳಿಗೆ ಹೇಗೆ ಗೊತ್ತು?

ಚಂ. ಮಾ :— ಏನು, ಹೇಳಬಾರದೆ ಬೇಗ, ಪಂಕಜೆ ?

ಪಂಕಜೆ :—
ಇಷ್ಟುದಿನ ನಮ್ಮೊಡನೆ ಇದ್ದವಳು ! ಹೇಳದೆಯೆ,
ಕೇಳದೆಯೆ ಒಳಸಂಚು ನಡೆಸುತ್ತ, ನಾಳೆ
ಚಂದ್ರಹಾಸನ ಕಟ್ಟಿಕೊಂಡೋಡುವಳು. ನೋಡು !

ವಿವಾಹಕ್ಕೆ ಸಕಲ ಸನ್ನಾಹಗಳು ನಡೆದಿಹವು !
ನಾಳೆ " ಬನದ ತಣ್ಣೆಳಲಲ್ಲಿ, ತಳಿರ ಶಯನದಿ "
ಎಂಬ ಹಾಡನು ಹಾಡಬೇಕಿವಳು !

ಚಂ. ಮಾ :— ಕೆಳದಿ,
ಸಖಿಯರನು ಕೇಳದೆಯೆ ಹೀಗೆ ಗಂಡನ ಗೊತ್ತು
ಮಾಡುವರೆ ? ನಿನಗಾರು ಅಪ್ಪಣೆಯ ಕೊಟ್ಟವರು ?
ಚಂದ್ರಹಾಸನ ನೀನು ಮದುವೆಯಾಗುವುದೆನಗೆ
ಸರಿಯಿಲ್ಲ.

ವಿಷಯೆ :—
(ನಸುನಗೆಯಿಂದ) ನೀನಿಂತು ಕರುಬಿದರೆ ನಾ ಬಿಡೆನು !

ಚಂ. ಮಾ :—
ಬಿನ್ನಾಣಿ ! ಸೊಕ್ಕೆಲ್ಲ ಕರಗುವುದು ತಾಳು !

ಪಂಕಜೆ :—
ಕೇಳಲ್ಲಿ ! ಮಂಗಳದ ವಾದ್ಯಗಳು ! (ಹೊರಗಡೆ ವಾದ್ಯ)

ಚಂ. ಮಾ :—
ಕೌಮುದಿಯು ಹೇಗಿರುವುದೀಗ, ವಿಷಯೆ ?

ವಿಷಯೆ :—(ನಗುತ್ತ)
ಚಂದ್ರಹಾಸನ ವದನ ಚಂದ್ರಿಕೆಯ ಹೋಲುತಿದೆ !

ಪಂಕಜೆ :—
ಮುಗ್ಧೆ ಎಂದವರಾರು ಇವಳ ? ಶೃಂಗಾರ
ದಲ್ಲಿವಳು ಬಹು ಪ್ರೌಢೆಯಾಗಿಹಳು !

ಚಂ. ಮಾ :— ಅಯ್ಯೋ !
ಬಿಂಕದ ಹೆಣ್ಣೆ ಕಬ್ಬುವಿಲ್ಲನ ಕಣ್ಣೆ !
(ಪರದೆ ಬೀಳುವುದು)

## ದೃಶ್ಯ ೫

[ದುಷ್ಟಬುದ್ಧಿಯ ಮನೆಯ ಒಂದು ಕೋಣೆ. ದುಷ್ಟಬುದ್ಧಿಯು ಒಂದಾಸನದಮೇಲೆ ಕುಳಿತಿಹನು. ಮದನನು ದೂರದಲ್ಲಿ ನಿಂತು ತಲೆ ಬಗ್ಗಿಸಿರುವನು. ಮಂತ್ರಿಯು ಹುಚ್ಚನಂತಿಹನು]

ದುಷ್ಟ :—
ಮೂರ್ಖ ! ಮರುಳೆ ! ನೀಚ ! ಕುಲಗೇಡಿ !
ನಾನು ಬರೆದಿಹುದೇನು ? ನೀನು ಮಾಡಿಹುದೇನು ?
ತಿರುಪೆ ಬೇಡಿನ್ನು ! ನಡೆ ! ಜಂಬುಕಂ ಜನಿಸಿತೇ
ಸಿಂಗದುದರದೊಳಕಟಾ ? ಹೆಂಬೇಡಿ ನೀನೆಲವೊ
ಕುಲಗೇಡಿ ! ನನ್ನ ಬಸಿರಿಂ ಬಂದವನೆ ಪೇಳ ?
ನಿನ್ನ ದೊರೆತನಕಾಗಿ ಜೀವವನೆ ಸವೆಸಿದೆನು !
ನಿನಗಾಗಿ ನೆತ್ತರಿನ ಕಡಲಲ್ಲಿ ಮುಳುಗಿದೆನು !
ನಿನಗೇಕೆ ಸಾಮ್ರಾಜ್ಯ ? ಅರಸುತನ ನಿನಗೇಕೆ ?
ತಿರುಕ, ಬೀದಿಯೊಳ್ಸಂಚರಿಸಿ ತಿರಿಯಿನ್ನು !
ಹಾ, ವಿಧಿಯೆ ! (ಮುಖ ಮುಚ್ಚಿಕೊಳ್ಳುವನು)

ಮದನ ?—(ಶೋಕದಿಂದ) ತಾತ, ನಾನೆಸಗಿದಪರಾಧ
ವೇನು ?

ದುಷ್ಟ :— ನಿನಗಿನ್ನು ವನವಾಸವೇ ಗತಿ !

ಮದನ :—
ಖತಿಯೇಕೆ ಜೀಯ ? ನಿಮ್ಮಡಿಗಳ ನಿರೂಪಮಂ
ಪ್ರತಿಪಾಲಿಸಿದೆನು ! ನಿಮ್ಮ ಸಮ್ಮತಿಯಂತೆ
ವಿಷಯೆಗೆ ವಿವಾಹಮಂ ವಿರಚಿಸಿದೆ ! ತಪ್ಪೇನು ?

ದುಷ್ಟ :—
ನಿನಗಕ್ಕರದ ಗುರುತಿಹುದೆ ? ಹೇಳು ! ನಿನಗೆ
ಬಿಜ್ಜೆಗಲಿಸಿದ ಬೊಜ್ಜ ಹಾರುವನು, ಗಾಲುವನು,
ಹಾಳಾಗಿಹೋಗಲಿ ! ಎಲ್ಲಿ ? ಕೊಡು ಪತ್ರಿಕೆಯ
ನೋಡೋಣ ! (ಮದನನು ಹೋಗುವನು)
ಆದುದಾಯಿತು ಇನ್ನು ಜಾಮಾತ
ನಂ ಕೊಂದ ಹೊರತೆನಗೆ ಸುಖಶಾಂತಿಗಳು ಇಲ್ಲ !
ವಿಷಯೆಯೋಲೆಯ ಭಾಗ್ಯ ಸುಟ್ಟುರಿದರೇನಂತೆ !
ನಿರ್ಭಾಗ್ಯೆ ಹಾಳಾಗಲಿ ! ಹೊರ ಬನದೊಳಿಹ ಚಂಡಿ
ಕಾಲಯಕೆ ವಿಧುಹಾಸನಂ ಕಳುಹಿ ಕಟುಕರಿಂ
ಕೊಲ್ಲಿಪೆಂ ! (ವಿಷಯೆ ಬರುವಳು ನಾಚುತ್ತ)

ವಿಷಯೆ :—ತಾತನಿಗೆ ವಂದಿಸುವೆ !

ದುಷ್ಟ :—(ಮೇಲೆದ್ದು ಕೋಪದಿಂದ) ತೊಲಗು,
ತೊಲಗು ತೊತ್ತಿನ ಮಗಳೆ. ತೊಲಗಾಚೆ ! ನನ್ನ
ಕಣ್ಣೆದುರು ನಿಲ್ಲದಿರು ! ಮೃತ್ಯುವಡಗಿದೆ ನಿನ್ನ
ನಗೆದಿಂಗಳಾಡುವೀ ಮೊಗದಲ್ಲಿ ! ಮೈಗಂಪು
ಸುಟ್ಟ ಹೆಣದಂತಿಹುದು ! ತೊಲಗು ತೊತ್ತಿನ ಮಗಳೆ,
ತೊಲಗಾಚೆ, ನನ್ನೆದುರು ನಿಲ್ಲದಿರು ! ನಿರ್ಭಾಗ್ಯೆ !

ವಿಷಯೆ:—(ಅಳುತ್ತ) ತಾತ, ಮನ್ನಿಸೆನ್ನಯ ತಪ್ಪ. ಪಾದಗಳೆ
ಗೆರಗುವೆನು ; ಬೇಡುವೆನು ! (ಅಡಿಗೆರಗುವಳು)

ದುಷ್ಟ :—(ಹಿಂದೆ ಸರಿದು) ಮುಟ್ಟದಿರು ! ಮುಟ್ಟದಿರು !
ನೀನಿಂದು ವಿಷಯೆಯಲ್ಲ, ವಿಷಮೂರ್ತಿ !
ಹೊರಡಾಚೆ, ನನ್ನೆದುರು ನಿಲ್ಲದಿರು ! (ವಿಷಯೆ ಅಳುತ್ತಾ ಹೋಗುವಳು)

[ಮದನನು ಪತ್ರಿಕೆಯನ್ನು ತೆಗೆದುಕೊಂಡು ಬಂದು ಕೊಡುವನು. ಮಂತ್ರಿಯು ಮನದಲ್ಲಿಯೇ ಎಲ್ಲವನ್ನೂ ಓದಿ ಬಿಸುಸುಯ್ಯು]

ಮದನ,
ನಿನ್ನ ತಪ್ಪಿದರೊಳೆನಿತಿಲ್ಲ ! ಮರುಗದಿರು
ಬೈದೆನೆಂದು.

ಮದನ :— ತಾತ ಬೈದರೆ ಕೋಪವೇಕೆ ?
ಕುಂತಳೇಂದ್ರನು ನನ್ನ ಕರೆತರಲು ದೂತರ
ನ್ನಟ್ಟಿಹನು ! ತೆರಳಲೇ !

ದುಷ್ಟ :— ಹೋಗು ! ಶಶಿಹಾಸ
ನಂ ಬೇಗ ಕಳುಹಿಲ್ಲಿ ! [ಮದನನು ಹೋಗುವನು)
ಎನ್ನ ಕೋಪವನವಗೆ
ಕಾಣಿಸದೆ ಮುಚ್ಚಿಡುವೆ ! ಹಾ ವಿಧಿಯೆ ನೀನೆನ್ನ
ಮೂದಲಿಸುತಿಹೆ ಏಕೆ ? ಎನ್ನಾತ್ಮಜೆಯ ಕಣ್ಣ
ನೀರಿನಲಿ ಎನ್ನ ಪುರುಷಾರ್ಥವನ್ನಿಟ್ಟಿಯಾ ?

[ಚಂದ್ರಹಾಸನು ಬಂದು ವಂದಿಸಿ ಕುಳಿತುಕೊಳ್ಳುವನು]

ಚಂದ್ರ :—ಪೂಜ್ಯರಿಗೆ ವಂದಿಪೆಂ ! (ಅಡಿಗೆರಗುವನು)

ದುಷ್ಟ :— ವೀರ, ಬಾರೈ ಚಂದ್ರ-
ಹಾಸ ನೀನಿನ್ನೆಗಂ ದೂರವಾಗಿರ್ದ ನಮ
ಗಿನ್ನಳಿಯನಾಗಿರುವೆ ! ಊರ ಹೊರ ಬನದೊಳಿಹ
ಚಂಡಿಕಾಲಯಕೆ ನೀಂ ನೀರಜಸಟಾಸ್ತ ಸಮ-
ಯದೊಳೊರ್ವನೇ ಪೋಗಿ ಗೌರಿಯಂ ಪೂಜಿಪುದು !
ವಂಶವಾಚಾರಮಿದು ವರಸಾದವಂಗೆ
ನೀನಿರದೆ ಪೂಜೆಯಂ ಮಾಡುವುದು. ಮರೆಯದಿರು !

ಚಂದ್ರ :—ತಪ್ಪದೇ ಹೋಗುವೆನು.

ದುಷ್ಟ :—(ನಗುತ್ತ) ಜೊತೆಯಲ್ಲಿ ವಿಷಯೆ ಬೇಕೇನು ?
ನೂತನ ವಧೂವರರು ಅಗಲುವುದೆ ಬಹು ಕಷ್ಟ !
ಆದರೆ, ವಂಶದಾಚಾರವುಂತಿಲ್ಲ !
ಒಬ್ಬನೇ ಹೋಗುವುದೆ ಪದ್ಧತಿಯು !

ಚಂದ್ರ :— ಪದ್ಧತಿಗೆ
ಭಂಗಬರದಂತೆ ನಡೆಯುವುದೆನ್ನ ಕರ್ತವ್ಯ,

ದುಷ್ಟ :—
ನಿಮ್ಮ ರಾಜ್ಯವ ನೋಡಿ ನನಗೆ ಸಂತಸವಾಯ್ತು
ನಿನ್ನ ತಂದೆಯ ಕೂಡೆ ರಾಜ್ಯವೆಲ್ಲವ ಸುತ್ತಿ
ಬಂದಿಹೆನು.

ಚಂದ್ರ :— ಶ್ರೀಹರಿಯ ಕೃಪೆಯಿಂದ, ಮೇಣ್ ನಿಮ್ಮ
ದಯೆಯಿಂದ !

ದುಷ್ಟ :— ಮೇಣ್ ನಿನ್ನ ಬಲದಿಂದ !
ನೀನಿನ್ನು ತೆರಳು ! ಚಂಡಿಕಾರಾಧನೆಗೆ
ಬೇಕಾದುದೆಲ್ಲವಂ ಸಿದ್ಧಪಡಿಸುವೆನು.
ಇನ್ನುಳಿದ ಕಟ್ಟಳೆಗಳೆಲ್ಲವಂ ಮುಗಿಸು, ನಡೆ

(ಚಂದ್ರಹಾಸನು ಹೋಗುವನು)

...ಕರಾ !

ಸೇವಕ :—(ಒಳಗೆ ಬಂದು) ಜೀಯ !

ಪರದೆ ಬೀಳುವುದು.

## ದೃಶ್ಯ ೬

[ಕಾಳಿಕಾಲಯಕ್ಕೆ ಹೋಗುವ ದಾರಿ. ಸಂಜೆಯ ಸಮಯ. ಚಂದ್ರಹಾಸ, ರಣಸಿಂಹ, ವೀರಸೇನರು ಬರುವರು. ಚಂದ್ರ ಹಾಸನ ಕೈಲಿ ಪೂಜೆಯ ವಸ್ತುಗಳಿರುವುವು.]

ರಣಸಿಂಹ :—ನಾವು ನಿನ್ನೊಡನೆ ಬರುವೆವು.

ಚಂದ್ರ :— ಬೇಡ, ಪದ್ಧತಿಯ
ಮೀರುವುದು ತರವಲ್ಲ. ದುಷ್ಟಬುದ್ಧಿಗೆ ತಿಳಿಯೆ
ಕೋಪಗೊಳ್ಳದೆ ಇರನು.

ವೀರಸೇನ :— ಮಂತ್ರಿಯೇತಕೆ ಇಂತು
ವರ್ತಿಪನೊ ? ನಾನರಿಯೆ ! ವಿಷಯೆ ಮದನರ ಬೈದು
ತಾರಕಾಕ್ಷಿಯ ಬಡಿದು ಸೇವಕರ ನಿಂದಿಸಿ
ಮದುವೆಗಾಗೈತಂದ ಕಮಲಮುಖಿಯರ ದೂರಿ
ಸಿಟ್ಟಿನಿಂದುರಿದನಂತೆ !

ಚಂದ್ರ :— ರಾಜಕಾರ್ಯದೊಳೇನು
ಕೋಪವುಂಟಾಗಿಹುದೊ ?

ರಣಸಿಂಹ :— ಅವನೊಳೆನಗೇಕೋ
ಸಂದೇಹ. ಹುಚ್ಚನಂತಾಡುವನು !

ವೀರಸೇನ :— ನೋಡಲ್ಲಿ,
ಮದನ ಬರುತಿಹನು. ನುಡಿಯಬೇಡಂತು !

ಮದನ :—(ಬರುವನು)
ವೀರಸೇನಗೆ ಜಯವಾಗಲಿ ! ಎಲ್ಲಿಗೆ ?

ಚಂದ್ರ :—ಚಂಡಿಕಾಲಯಕೆ !

ರಣಸಿಂಹ :—ಮದನ, ನೀನೀಗ ಎಲ್ಲಿಂದ ಬರುತಲಿಹೆ ?

ಮದನ :—ಕುಂತಳೇಂದ್ರನ ಬಳಿಗೆ ಹೋಗಿದ್ದೆ ! ಶಶಿಹಾಸ
ನನ್ನೀಗಲೇ ಕಳುಹಬೇಕೆಂಬುದಾಜ್ಞೆ !

ರಣಸಿಂಹ :— ಏಕೆ ?

ಮದನ :—
ಕುಂತಳೇಂದ್ರನು ರಾಜ್ಯವಂ ಬಿಟ್ಟು, ತನ್ನ ಸುತೆ
ಚಂಪಕಮಾಲಿನಿಯುಂ ವಿಧುಹಾಸನಿಗೆ ಕೊಟ್ಟು
ರಾಜ್ಯಧಾರವನವನ ಕೈಲಿಟ್ಟು ಶ್ರೀ ಹರಿಯ
ಧ್ಯಾನಿಸಲು ಬನಕೆ ಪೊರಡುವನಂತೆ.

ಚಂದ್ರ :—
ಚಂಡಿಕಾರಾಧನೆಯ ಮಾಡುವವರಾರು ?

ಮದನ :—
ವಂಶವಾಚಾರವಮದು ನಾನು ಮಾಡಿದರಾಯ್ತು !
ನೀನೀಗ ರಣಸಿಂಹ, ವೀರಸೇನರ ಕೂಡಿ
ರಾಜನಲ್ಲಿಗೆ ತೆರಳು ! ನಿನಗಾಗಿ ಕಾದಿಹನು !
ಪೂಜೆಯ ಸುವಸ್ತುಗಳನಿಲ್ಲಿ ಕೊಡು ! ತೆರಳೆ !

(ಚಂದ್ರಹಾಸನು ಪೂಜಾ ಸಾಮಗ್ರಿಗಳನ್ನು ಕೊಡುವನು. ಮದನನ ಕೈಯಿಂದ ಹರಿವಾಣ ಕೆಳಗೆ ಬೀಳುವುದು)

ಚಂದ್ರ :—ಏನಿದಪಶಕುನ ! ನಾನೆ ಪೂಜೆಯಮಾಡಿ
ಆ ಮೇಲೆ ಹೋಗುವೆನು ದೊರೆಯೆಡೆಗೆ !

ಮದನ :— ಏನಿದು ?
ವೀರನಾಗಿಹ ನೀನು ಶಕುನಗಳಿಗಂಜುವುದೆ ?
ನಡೆ, ಚಂದ್ರಹಾಸ. ನೀನು ಹರಿಭಕ್ತ ; ನಿನಗೆ
ಕೆಡುಕುಂಟೆ ?

(ಚಂದ್ರಹಾಸನು ವೀರಸೇನ, ರಣಸಿಂಹರೊಡನೆ ಹೋಗುವನು. ಮದನನು ಕೆಳಗೆ ಬಿದ್ದ ವಸ್ತುಗಳನು ಆಯ್ದು ತಟ್ಟೆಗೆ ಹಾಕಿಕೊಳ್ಳುವನು )

ಸೂರ್ಯನಾಗಲೆ ಮುಳುಗುತಿಹನು ;
ಕತ್ತಲೆಯ ಮುಂಗಪ್ಪು ಮುಸುಗುತಿದೆ. ಹಕ್ಕಿಗಳು
ಗೂಡಿಂಗೆ ಹಾರುತಿವೆ. ನಭದಲ್ಲಿ ಮೆಲುಮೆಲನೆ
ಚುಕ್ಕಿಗಳು ಮೂಡುತಿವೆ. ಕಣ್ಣು ಹಾರುವುದೇಕೆ ?
ಚೀರುತಿವೆ ಪೂರ್ವದ ಬಿಡಾಲಗಳ್ಪಕ್ಷಿಗ-
ಳ್ಕಾರುತಿವೆ ರುಧಿರಮಂ. ಕೂಗುತಿಹ ಗೂಗೆಗ-
ಳ್ಸಾರುತಿವೆ ದುರ್ನಿಮಿತ್ತಂಗಳಂ. ವ್ರತ ಭಂಗ
ವಪ್ಪುದೇ ? ನೀರೆಯರು ನಡುಗುವರು, ಬೆದರುವರು ;
ವೀರರಳುಕುವುದುಂಟೆ ಅಪಶಕುನಗಳ ಕಂಡು ?
ಮರಣವೈತಹ ಮುನ್ನ ಹೇಡಿಗಳನೇಕಸಲ
ಸಾಯುವರು ! ಮಡಿಯುವರು ವೀರರೊಂದೇ ಭಾರಿ !

(ದೂರ ನೋಡಿ)

ತ್ರೀ ಚಾಮಡಿಕಾಲಯದ ಪೊಂಗಳಸವೆಂತು
ಮೆರೆವುದಲ್ಲಿ ನೆತ್ತರಿಳಿವವಳ ನಾಲಗೆಯಂತೆ! (ತೆರಳುವನು)

ಪರದೆ ಬೀಳುವುದು.

## ದೃಶ್ಯ ೭

[ಕಾಳಿಕಾ ದೇವಸ್ಥಾನದ ಸುತ್ತಲು ಭೀಷಣ, ಕಾಳ, ಮಾರ ಮೂವರೂ ಬಿಚ್ಚಿದ ಕತ್ತಿಗಳನ್ನು ಹಿಡಿದು ಮಾತಾಡುತ್ತಿರುವರು.]

ಭೀಷಣ :—
ಕಾಳನು ಆ ಬಾಗಿಲ ಹಿಂದುಗಡೆ ಅವಿತುಕೊಂಡಿರಲಿ ;
ಮಾರ, ನೀನು ಮೂರ್ತಿಯ ಹಿಂದುಗಡೆ ಅಡಗಿರು.
ನಾನಿಲ್ಲಿಯೇ ನಿಂತು ಅವನು ಬರುವ ಹಾದಿಯನ್ನೇ
ನೋಡುತ್ತಿರುವೆನು.

ಮಾರ :—
ಅಂದವನ ಬಿಟ್ಟಂತೆ ಇಂದು ಬಿಟ್ಟರೆ ನಮ್ಮ ತಲೆ
ರಟ್ಟೆಗಳ ಮೇಲಿರುವುದಿಲ್ಲ.

ಕಾಳ :—
ಇಂದು ಬಿಡುವುದೇ ? ಯಾರು ಬಿಟ್ಟರೂ ನಾನು
ಬಿಡೆನು !

ಭೀಷಣ :—
ಒಂದೇ ಏಟಿಗೆ ತುಂಡಾಗುವಂತೆ ಹೊಡೆಯಬೇಕು.
ಯಾರು ಹಿಂಜರಿಯಬಾರದು.

ಮಾರ :—
ನಿನಗೇಕೆ ? ನಮ್ಮ ಮಾರಿಯ ಮುಂದೆ ನಾವು
ಹೆದರುವುದುಂಟೆ ?

ಕಾಳ :—ಇಂದವಳಿಗೆ ನರಬಲಿ ಕೊಡುವೆವು.

ಮಾರ :—ಒಬ್ಬನೇ ಬರುವನೋ, ಕೂಡಿ ಬರುವನೋ ?

ಭೀಷಣ :—
ಒಬ್ಬನಾಗಲಿ ಇಬ್ಬರಾಗಲಿ ತುಂಡುಮಾಡುವುದೆ ನಮ್ಮ
ಕರ್ತವ್ಯ. ಕತ್ತಿಯನ್ನು ಚೆನ್ನಾಗಿ ಮಸೆವಿದ್ದೀಯಾ ?

ಮಾರ :—(ಕತ್ತಿಯ ಬಾಯಿಗೆ ಕೈಹಾಕಿ ನೋಡಿ)
ಓಹೊ ! ಕಲ್ಲನ್ನು ಕೂಡ ಕತ್ತರಿಸಬಲ್ಲುದು !

ಭೀಷಣ :—
ನೋಡಿ, ದೂರದಲ್ಲಾವುದೋ ಆಕೃತಿಯು ಚಲಿಸು
ವಂತೆ ಕಾಣುವುದಿಲ್ಲವೆ ! (ಎಲ್ಲರು ನೋಡುವರು)

ಮಾರ :—
ನನ್ನ ಕಣ್ಣು ಮಂದ ; ನನಗೇನೂ ಕಾಣಿಸುವುದಿಲ್ಲ.

ಕಾಳ :—
ಹೌದು, ಏನೊ ಚಲಿಸದಂತಾಗುತಿದೆ !

ಭೀಷಣ :—
ನಿಮ್ಮ ನಿಮ್ಮ ಸ್ಥಳಗಳಿಗೆ ಹೋಗಿ. ಅಡಗಿರಿ.
ಅವನೇ ಬರುತಿಹನು. ನಾನು ' ಹೊವ್ ' ಎಂದ
ಕೂಡಲೇ ಬಂದೆಲ್ಲ ಮುತ್ತಬೇಕು. ತಿಳಿಯಿತೆ !

ಮಾರ :—ಹುಂ ! ತಿಳಿಯಿತು !

[ಕಾಳನು ಬಾಗಿಲ ಹಿಂದೆಯೂ ಮಾರನು ಮೂರ್ತಿಯ ಹಿಂದೆಯೂ ಅಡಗುವರು. ಭೀಷಣನು ದೂರ ಮರೆಯಾಗಿ ನಿಲ್ಲುವನು. ಸ್ವಲ್ಪ ಹೊತ್ತಾದ ಬಳಿಕ ಮದನನು ಬರುವನು]

ಮದನೆ :—

ಯಾರೋ ಮಾತನಾಡಿದಹಾಗೆ ಕೇಳಿಸಿತು !
ಯಾರಿರುವರಿಲ್ಲ ? (ಸುತ್ತ ನೋಡಿ) ಘೋರಾಂಧಕಾರದಲಿ
ಅಳಿಸಿಹೋಗಿಹುದೆಲ್ಲ. ನಾನು ಕೇಳಿದ ಸದ್ದು
ಕಲ್ಪನೆಯ ಸದ್ದೆಂದು ತೋರುವುದು !
(ಹರಿವಾಣವನ್ನು ಕೆಳಗಿಟ್ಟು ಹಣತೆಯನು ಹೊತ್ತಿಸಿ ವಿಗ್ರಹದ ಮುಂದೆ ಇಡುವನು) ಜಯ ಶ್ರೀ ಕಾಳಿ !

ಭೀಷಣ :— ಹೊಯ್ ಮಾರ ! (ನುಗ್ಗಿ ಮುಂದಕೆ ಕತ್ತಿಯಿಂದಿರಿಯುವನು)

ಮಾರ :— ಇರಿ ! ಕಡಿ !

ಕಾಳ :— ಹೊಡಿ ! ಬಡಿ ! ಕೊಲ್ಲು.

ಮದನ :— ಅಯ್ಯೋ, ದುಷ್ಟರಿರಾ ! (ತಳಿಗೆಯನ್ನೆತ್ತಿ ಭೀಷಣನಿಗೆ ಹೊಡೆಯುವನು) ಶ್ರೀಹರಿ ! ಶ್ರೀಹರಿ !

(ಎಂದು ಬೀಳುವನು)

ಭೀಷಣ :— ಸತ್ತೆನಲ್ಲೋ ಮಾರ, ಕಾಳ ! (ಮೂರ್ಛೆಯಿಂದ ಬೀಳುವನು)

ಕಾಳ :— (ಬೆಚ್ಚಿ) ಮಾರ, ಅವನಲ್ಲ ಕಾಣೊ !

ಮಾರ :— ಮತ್ತಾರೊ ?

ಕಾಳ :— ನೋಡು, ಮಂತ್ರಿಯ ಮಕ್ಕಳಲ್ಲವೆ ?

ಮಾರ :— (ನೋಡಿ)

ಕೆಟ್ಟೆವಲ್ಲಾ ! ಕಾಳ ! (ದೀಪವನ್ನು ಎಡವಿ ಹೋಗುವರು)

ಕಾಳ :— ಎಲ್ಲಿಗಾದರೂ ಓಡೋಣ ಬಾ ! (ಓಡುವರು)

ಮಾರ :— ಭೀಷಣ ?

ಕಾಳ :— ಅವನು ಹಾಳಾಗಲಿ ! ಬಾ ! (ಓಡುವರು)

ಮದನ :— (ಹೊರಳುತ್ತಾ)

ಅಯ್ಯೋ ! ತಾತ ! ವಿಷಯೆ ! ಚಂದ್ರಹಾಸ !
ತಪ್ಪ ಮನ್ನಿಸು ತಾತ ! ಅಪರಾಧಮಾಡಿದನೆ ?
ಕ್ರೂರವಿದು ! ಕ್ರೂರವಿದು ! ಚಂದ್ರಹಾಸಾ ! ಬಾ !
ಮದನ ಕರೆವನು ನಿನ್ನ ! ಪುಣ್ಯವಂತನು ನೀನು !
ನೀನಲ್ಲ ಸಾಯುವನು ; ನನಗದೇ ಶಾಂತಿ !
ನಿನ್ನ ನಿರದಿರಿಯುತಿದ್ದರು ಇವರು ! ನೀನುಳಿದೆ !
ತಂಗಿ, ನಿನ್ನ ಓಲೆಯ ಭಾಗ್ಯ ಚಿರಮುಕ್ಕೆ !
ತಾತ ! ತಂಗಿ ! ಶಶಿಹಾಸ ! ಶ್ರೀಹರಿ ! (ಸಾಯುವನು)

[ದುಷ್ಟಬುದ್ಧಿಯು ಹುಚ್ಚನಂತೆ ಓಡಿಬರುವನು]

ದುಷ್ಟ :—

ಬೇಡ ! ಬೇಡ ! ಚಂಡಾಲರೇ ಬೇಡ !
ನಿಮಗೇನು ಬೇಕಾದರೂ ನೀಡುವೆನು ಬೇಡ !
ಎನ್ನ ಮಗನನ್ನುಳುಹಿ ! ಮದನ, ಎಲ್ಲಿರುವೆ ?
ಎಲೆ ಘೋರ ತಿಮಿರವೇ ಒಂದು ಘಳಿಗೆಯು ಮಾತ್ರ
ಹಿಂದೆ ಸರಿ ! ಒಂದು ಗಳಿಗೆಯು ಮಾತ್ರ ಬೆಳಕ ಬಿಡು !
ಏನು ಕೆಸರಿದು ? ನೆತ್ತರಿನ ಕೆಸರು ! ಮದನ !
ಎನ್ನ ಮುದ್ದಿನ ಮದನ ! ಮೂಡುತಿಹ ಚಂದಿರನ
ಕಾಂತಿಯಲಿ ಹೊಳೆವದೇನಿದು ? ಕತ್ತಿ ! ಯಾರಿಲ್ಲಿ
ಬಿದ್ದಿಹನು ! (ಮದನನನ್ನು ಕಂಡು ಮೇಲೆ ಬಿದ್ದು)
ಮದನ ! ಮದನ ! ಮದನ !

ಮೂಡದಿರು ಎಲೆ ಚಂದ್ರ ! ಮೂಡದಿರು ! ಮೂಡದಿರು
ಈ ಘೋರ ದೃಶ್ಯಮಂ ಬೆಳಗಲೆಂದಲ್ಲ
ಬಿದಿ ನಿನ್ನ ಮಾಡಿದುದು ? ಕತ್ತಲೆಯೆ, ಕವಿ, ವ.
ಪರಮಾತ್ಮ ಕ್ಷಮಿಸೆನ್ನ ! ಬೇಡ ! ಮನ್ನಿಸಬೇಡ !
ನರಕವೇ ಬಾಯಿತೆರೆ ! ನುಂಗೆನ್ನ ಜೀವಮಂ !
ನಿನಗಿಂಥ ಘೋರತರವೀ ಘೋರ ಭೂತಳಂ !
ಚಂದ್ರಹಾಸಾ ! ವಿಷಯೆ ! ಪಾಪಿಯಂ ಕ್ಷಮಿಸಿ !
ಭೂಮಿಯಲಿ ಮಚ್ಚರದಿ ಬಾಳುವರು, ಕರುಬುವರು,
ಅತ್ಯಾಶೆಮಾಡುವರು ಬಂದೆನ್ನ ನೋಡಿ !
ಮನ್ನಿಪೆನು ಮದನ, ಏಳು, ಮೇಲೇಳು ?
ನಿನಗಾಗಿ ಬಾಳಿದೆನು ; ನಿನಗಾಗಿ ಅಳಿದೆನು !
ನಿನಗಾಗಿ ನೆತ್ತರಿನ ನರಕದಲಿ ಮುಳುಗಿಹೆನು !
ಭೂತಳದಿ ಬಾಳೆಂಬುದಿದು ಬಿದಿಯ ಮೂದಲಿಕೆ !
ಎಲೆ ಜೀವ, ನಿನ್ನ ಬಲಿಗೊಳಗಾಗುವನೆ ಮರುಳೆ ?
ಮದನನೆದೆಯಿಂದಿಳಿದ ಬಿಸಿಯಾದ ನೆತ್ತರವೆ,
ಕಂಪಿಸಳೆ ಭೂದೇವಿ ನಿನ್ನ ಸೋಂಕಿನಿಂ ?
ಗಾಲವಾ, ಬಾ, ಇಲ್ಲಿ, ನಿನ್ನ ಮುದ್ದಿನ ಶಿಷ್ಯ
ನೇನಾಗಿಹನು ನೋಡು ! ನಿನ್ನ ಮಂತ್ರದಿ ಶಕ್ತಿ
ಯಿದ್ದರೆ ಇವನನೆಚ್ಚರಿಸು ! ಕುಂತಳೇಂದ್ರನೆ, ಬಾ,
ಮದನನೇಳುವ ತೆರದಿ ಅಣತಿಯ ನೀಡು !
ಹೇ ದುಷ್ಟಬುದ್ಧಿ ! ನಿನ್ನ ಮಂತ್ರಿಯ ಯುಕ್ತಿ
ಈಗೆಲ್ಲಿ ? ತೋರು ! ತಾರಕಾಕ್ಷಿಯೆ ಬಾ
ತಾಯಿಯೊಲ್ಮೆಯು ಬಲದಿ ನಿನ್ನ ಮುದ್ದಿನ ಮಗುವ
ನೆಚ್ಚರಿಸು ! ಎಲೆ ಗಾಳಿ ನೀನೇಕೆ ಬನಗಳಲಿ
ಬರಿದೆ ಸಂಚರಿಸುತಿಹೆ ? ಬಂದೆನ್ನ ಮದನನೀ
ಹೃದಯದಲಿ ತಿರುಗಾಡಲಾರೆಯಾ ? ಮಾನವಾ,
ಕ್ರೂರ ಪರಿಹಾಸ್ಯವೀ ಭೂಮಿ , ಕ್ರೂರ ಪರಿ-
ಹಾಸ್ಯವೀ ಧಾರಿಣಿಯ ಬಾಳು ! ಕ್ರೂರಾತ್ಮ
ನಾಗಿಹಂ ಪರಮಾತ್ಮ ! ಕ್ರೂರವಾಗಿಹುದು ವಿಧಿ !

ನಂಬದಿರು, ಒಂದು ಹುಲ್ಲೆಸಳ ನೀ ನಂಬದಿರು !
ಎಲ್ಲರರಿಗಳು ನಿನಗೆ ! ಎಲ್ಲರರಿವರು ನಿನ್ನ !
ಮಗನ ಎದೆಯನು ಇರಿದ ಕೂರಸಿಯೆ ಬಾಯಿಲ್ಲಿ
ತಂದೆ ಎದೆಯನು ನೋಡು (ಖಡ್ಗವನ್ನು ತೆಗೆದುಕೊಂಡು)

ನಿನ್ನ ಕೊಂದೀ ಎದೆಯು

ಮದನ, ನಿನ್ನೆದೆಯ ಮೇಲೆಯೆ ಬೀಳುವುದು
ಮದನ, ನನ್ನ ಬಸಿರಲಿ ಬಂದು ನಿನಗಮಾ
ಯಿರವಾಯ್ತೆ ? ಸಾಕೆನಗೆ ನಿನ್ನ ಸಹವಾಸ
ಹೇ ಕ್ರೂರ ಲೋಕವೇ ! ಕಡೆಯ ವಂದನೆ ನಿನಗೆ !
ನರಕವೇ, ಬಾಯಿ ತೆರೆ ! ಹಿಂದೆಂದು ನಿನ್ನೆಡೆಗೆ
ಬಾರದಿಹ ದುಷ್ಟನೊಬ್ಬನು ಬಹನು ! ಬೆದರದಿರು !

(ಕತ್ತಿಯಿಂದಿರಿದುಕೊಳ್ಳುವನು)

ನರಕವೇ ನಿನಗೆ ಗೆಲವಕ್ಕೆ ! ಜಯಮಕ್ಕೆ !

(ಮದನನ ಮೇಲೆ ಬಿದ್ದು ಸಾಯುವನು)

[ಚಂದ್ರಹಾಸ, ವೀರಸೇನ, ರಣಸಿಂಹ, ಗಾಲವ ಇವರು ದೀವಿಗೆಗಳನ್ನು ಹಿಡಿದು ಓಡಿಬರುವರು. ದಿಗ್ಭ್ರಾಂತರಾಗಿ ಘೋರ ದೃಶ್ಯವನ್ನು ನೋಡುವರು.]

ಗಾಲವ :—

ಶಶಿಹಾಸ, ಮುಗಿಹೋಯಿತು ಕಾರ್ಯ ! ಮುಂದಾಗಿ
ಒರಲಿಲ್ಲ ನಾವು !

ಚಂದ್ರ :—(ಬಿಸುಸುಯ್ದು) ಶ್ರೀ ಹರಿ ! ಶ್ರೀ ಕೃಷ್ಣ !

ರಣಸಿಂಹ :—ಗಾಲವರೆ ಇದರರ್ಥವೇನು ?

ಗಾಲವ :— ನಾನರಿಯೆ !

ಶ್ರೀ ಹರಿಯೆ ಬಲ್ಲ !

ಭೀಷಣ :—(ಮೂರ್ಛೆಯಿಂದೆದ್ದು)

ಅಯ್ಯೊ ! ಮಾರ ! ಕಾಳ !

ವೀರಸೇನ :—

ಇವನಾರೋ ಬದುಕಿಹನು ! ಕ್ರೂರ ಕಾರ್ಯಕೆ ಬಂದ
ಚಂಡಾಲನಿರಬೇಕು.

ಗಾಲವ :—(ನೋಡಿ ಬೆರಗಾಗಿ)-(ಸ್ವಗತ) ಭೀಷಣನು !

(ಬಾಹ್ಯ) ಭೀಷಣಾ !

ಭೀಷಣ :—ಸಾಯುವೆನು ; ಅಯ್ಯೋ ನೀರು !

ಗಾಲವ :—ಭೀಷಣ ! ಇದೇನು

ಭೀಷಣ :—ನೀರು ! ಎಲ್ಲಾ ಹೇಳುವೆನು.

(ಚಂದ್ರಹಾಸನು ನೀರು ಕೊಡುವನು. ಕುಡಿದು)

ಮಂತ್ರಿವರ್ಯರ ಮಾತು ಕೇಳಿ ಕೊಲೆಮಾಡಿದೆವು.

ರಣಸಿಂಹ :—ಏನಂತೆ ?

ಚಂದ್ರ :—ಸುಮ್ಮನಿರು ಹೇಳಲಿ !

ಭೀಷಣ :—

ಕಾಳಿಕಾಲಯಕೆ–ಸಂಜೆಯಲಿ ಪೂಜೆಗೆ ಬರುವವನ
ಕೊಲೆಮಾಡಬೇಕೆಂದು ಬೆಸಸಿದರು ! ಅವನನ್ನು
ಕೊಲ್ಲುವಾಗ ತಳಗಿಯಿಂದೆನ್ನ ಹೊಡೆದನು ! ಅಯ್ಯೊ !
ಸಾಯುವೆನು–ಸಾಯುವೆನು–ಮಾರ–ಕಾಳ–

(ಸಾಯುವನು.)

(ಎಲ್ಲರೂ ಒಬ್ಬರ ಮುಖವನ್ನೊಬ್ಬರು ನೋಡುವರು)

ಗಾಲವ :—

ಶಶಿಹಾಸ, ಶ್ರೀ ಹರಿಯೆ ಕಾಪಾಡಿದನು ನಿನ್ನ !
ಕರ್ಮಫಲ ಬಿಡುವುದೇ ? ದೈವವನು ಮೀರುವರೆ ?

(ಪರದೆ ಬೀಳುವುದು)

॥ ಸಂಪೂರ್ಣಂ ॥